ಸಮಾಜ ಪುಸ್ತಕಮಾಲೆ, ಧಾರವಾಡ.

ಮಹಾಕವಿ ಶ್ರೀ ಕಲ್ಯಾಣಮಲ್ಲನು ಬರೆದ

# ಅನಂಗರಂಗ,

(ರತಿಶಾಸ್ತ್ರ)

"ವಿಹಾರಿ"

ಮುದ್ರಕರು:
ತೇ. ಗೋ. ಕುಲಕರ್ಣಿ
ಸಾಧನ ಮುದ್ರಣಾಲಯ, ಧಾರವಾಡ



ಪ್ರಕಾಶಕರು:
ಬಾಲಚಂದ್ರ ಘಾಣೇಕರ
ಸಮಾಜ ಪುಸ್ತಕಾಲಯ, ಧಾರವಾಡ



೧೯೪೭

ಆವೃತ್ತಿ ಬೆಲೆ ೧-೮-೦

ಜಲಕ್ರೀಡೆಯನ್ನು ಮಾಡುತ್ತಿರುವಾಗ ನಾಯಿಕೆಯಿಂದ ದೂರದಲ್ಲಿ ಮುಳುಗಿ, ನೀರಿನಲ್ಲಿಯೇ ಆಕೆಯ ಶರೀರವನ್ನು ಸ್ಪರ್ಶಿಸಿ, ಮುಳುಗುವಂತೆ ಮಾಡಿ ಮೇಲೆ ಬರಬೇಕು.. ತನ್ನ ದುಃಖದಾಯಕ ಕತೆಯನ್ನು ನಾಯಕನು ನಾಯಿಕೆಗೆ ಆಗಾಗ್ಗೆ ಹೇಳುತ್ತಿರಬೇಕು. ಯಾವುದಾದರೊಂದು ಕಾರಣ ವನ್ನು ಮುಂದೆ ಮಾಡಿ, ತನಗೆ ಬಿದ್ದ ಪ್ರೇಮಸ್ವಪ್ನವನ್ನವಳಿಗೆ—ಅವಳ ಚಿತ್ತಕ್ಕೆ ಬಿಂಬಿಸುವಂತೆ ಹೇಳಬೇಕು. ನಾಟಕಗೃಹದಲ್ಲಿ ಅಥವಾ ಸ್ವಜನ ಸಮೂಹದಲ್ಲಿ ನಾಯಿಕೆಯನ್ನು ತನ್ನ ಹತ್ತಿರ ಕೂಡ್ರಿಸಿಕೊಳ್ಳಬೇಕು; ಯಾವುದಾದರೊಂದು ಕಾರಣದಿಂದ ಅವಳನ್ನು ಮುಟ್ಟಬೇಕಲ್ಲದೆ, ಅವಳು ತನ್ನನ್ನೇ ಆಶ್ರಯಿಸಬೇಕೆಂಬ ಉದ್ದೇಶದಿಂದ ನಾಯಕನು ತನ್ನ ಪಾದ ದಿಂದ ನಾಯಿಕೆಯ ಪಾದವನ್ನು ತಿಕ್ಕಬೇಕು. ಇಷ್ಟಕ್ಕೆ ನಾಯಿಕೆಯ ಸಮ್ಮತಿಯು ದೊರೆತರೆ, ಮುಂದೆ ಅವಳ ಒಂದೊಂದು ಬೆರಳನ್ನು ನಿಧಾನ ವಾಗಿ ಸ್ಪರ್ಶಿಸಬೇಕಲ್ಲದೆ, ತನ್ನ ಹೆಬ್ಬೊಟ್ಟಿನಿಂದ ಅವಳ ಉಗುರುಗಳ ಮೂಲದಲ್ಲಿ ತುರಿಸಬೇಕು. ಇದೂ ಕೂಡ ನಾಯಿಕೆಗೆ ಸಮ್ಮತವಾದ ನಂತರ ಅವಳ ತೊಡೆ, ಜಘನ ಮತ್ತು ಸ್ತನಗಳನ್ನು ಸ್ಪರ್ಶಿಸಬೇಕು. ಈ ಸ್ಪರ್ಶವು ಉದ್ದೇಶಪೂರ್ವಕವಾಗ ಎಂದು ಅವಳಿಗೆ ಅನಿಸಬೇಕೆಂದು ಮೇಲಿನಂತೆ ಸ್ಪರ್ಶಿಸಬೇಕು.

ನಾಯಿಕೆಯು ಕಾಲು ತೊಳೆಸುತ್ತಿರುವಾಗ ನಾಯಕನು ತನ್ನ ಕಾಲು ಬೆರಳಿನಿಂದ ನಾಯಿಕೆಯ ಕೈಬೆರಳನ್ನು ಮೃದುವಾಗಿ ಒತ್ತಬೇಕು. ನಾಯಿಕೆಯು ಯಾವುದಾದರೊಂದು ಪದಾರ್ಥವನ್ನು ಕೊಡುತ್ತಿರುವಾಗ ಇಲ್ಲವೆ ತೆಗೆದುಕೊಳ್ಳುತ್ತಿರುವಾಗ ನಾಯಕನು ನಖಸ್ಪರ್ಶಮಾಡಬೇಕು. ಆಚಮನಕ್ಕಾಗಿ ನಾಯಿಕೆಯು ನೀರನ್ನು ಕೊಡುವಾಗ ಅದನ್ನು ನಾಯಿಕೆಯ ಮೈಮೇಲೆ ಜೀಕಳಿಯುಂತೆ ಬಿಡಬೇಕು. ಏಕಾಂತದಲ್ಲಿ ಮತ್ತು ಕತ್ತಲೆಯಲ್ಲಿ ಇಬ್ಬರೂ ಕೂತಿರುವಾಗ ನಾಯಿಕೆಗೆ ಸಹನವಾಗುವಂತಹ ಮಾತುಗಳನ್ನೇ ನಾಯಕನು ಪ್ರಸ್ತಾಪಿಸಬೇಕು. ಅಲ್ಲಿ ಅವಳನ್ನು ನೋಯಿಸದೆ, ಅವಳ ಕಲೆಯಿಂದಲೇ ತನ್ನ ಉದ್ದೇಶವನ್ನು ಅವಳಿಗೆ ತಿಳಿಸಬೇಕು. ಏಕಾಂತದಲ್ಲಿ ಮಹತ್ವದ ವಿಷಯವೊಂದನ್ನು ಹೇಳುವುದಿದೆಯೆಂದು ಮೊದಲಿಗೆ ಹೇಳಿ, ಅವಳು ಬಂದನಂತರ ಒಂದೇ ಹಾಸಿಗೆಯ ಮೇಲೆ ಇಬ್ಬರೂ ಕೂತು, ಆ ಮೇಲೆ ಅವಳಿಗೆ ತನ್ನ ಉದ್ದೇಶವನ್ನು ತಿಳಿಸಬೇಕು; ಮತ್ತು ಅವಳಲ್ಲಿ

ಹುಟ್ಟುವ ಮನೋವಿಕಾರಗಳನ್ನು ಗುರುತಿಸಬೇಕು. ( ಇದನ್ನು ಪಾರದಾರಿಕ ಪ್ರಕರಣದಲ್ಲಿ ಹೆಚ್ಚಾಗಿ ವಿವೇಚಿಸಲಾಗುವುದು. ಅನು. )

ಸಂಭೋಗ ವಿಷಯದಲ್ಲಿ ನಾಯಿಕೆಯ ಉದ್ದೇಶವು ಏನಿದೆ ಎಂಬುದು ತಿಳಿದುಬಂದನಂತರ ಯಾವ ಪ್ರಕಾರ ಮುಂದಿನ ಪ್ರಯತ್ನ ಮಾಡಬೇಕೆಂಬುದನ್ನು ಸೂತ್ರಕಾರರು ಹೇಳುತ್ತಾರೆ.

**ವಿದಿತಭಾವಸ್ತು ವ್ಯಾಧಿಮುಪದಿಶ್ಯೈನಾಂ ವಾರ್ತಾಗ್ರಹಣಾರ್ಥಂ ಸ್ವಮುದವಸಿತ ಮಾನಯೇತ್ ॥**

ನಾಯಿಕೆಯ ಮನಸ್ಸಿನ ಇಂಗಿತವನ್ನು ತಿಳಿದ ನಂತರ ತನಗೆ ಜಡ್ಡಾಗಿದೆ ಎಂಬ ನಟನೆಯನ್ನು ಮಾಡಿ, ಅದಕ್ಕಾಗಿ ತನ್ನ ಕ್ಷೇಮಸಮಾಚಾರವನ್ನು ತೆಗೆದುಕೊಳ್ಳಲಿಕ್ಕೆಂದು, ವಿಶ್ವಾಸಿಕ ದೂತಿಯ ಮೂಲಕ ನಾಯಕನು ಅವಳನ್ನು ತನ್ನ ಮನೆಗೆ ಕರೆಯಿಸಿಕೊಳ್ಳಬೇಕು. ಅವಳು ಬಂದ ನಂತರ ತನ್ನ ತಲೆಯನ್ನು ಒತ್ತಲು ಹೇಳಬೇಕಲ್ಲದೆ, ತಾನೇ ಅವಳ ಕೈಯನ್ನು ತೆಗೆದುಕೊಂಡು, ತನ್ನ ಹಣೆಯ ಮೇಲೂ ಕಣ್ಣುಗಳ ಮೇಲೂ ಸಾತ್ವಿಕ ಭಾವದಿಂದ ಇಟ್ಟುಕೊಳ್ಳಬೇಕು. ಔಷಧೋಪಚಾರಗಳ ಉದ್ದೇಶದಿಂದ ನಾಯಿಕೆಗೆ ಏನಾದರೊಂದು ಕೆಲಸವನ್ನು ಹೇಳಬೇಕು. ನೀನೇ ಇದನ್ನು ಮಾಡಬೇಕು; ನಿನ್ನನ್ನು ಬಿಟ್ಟರೆ ಬೇರೆಯವರಿಂದ ಇದು ಆಗಲು ಶಕ್ಯವಿಲ್ಲವೆಂದು ನಿರ್ಬಂಧಿಸಬೇಕು. ಅವಳು ಹೋಗಹತ್ತಿದರೆ ಇನ್ನೊಮ್ಮೆ ಬರುವ ಆಶ್ವಾಸನ ತೆಗೆದುಕೊಂಡು ಅವಳನ್ನು ಹೋಗಗೊಡಬೇಕು. ನಾಯಿಕೆಯ ಪ್ರಾಪ್ತಿ ವಿಷಯಗಳ ಈ ಉಪಚಾರದ ಪ್ರಯೋಗವನ್ನು ಮೂರು ದಿವಸಗಳ ವರೆಗೆ ಬಿಟ್ಟೂಬಿಡದೆ ಮಾಡಬೇಕು. ನಾಯಿಕೆಯು ಮೇಲಿಂದ ಮೇಲೆ ಭೆಟ್ಟಿಯಾಗಲು ಬಂದಾಗ ಅವಳಿಗೆ ಬೇರೆ ಬೇರೆ ಸಂಗತಿಗಳನ್ನು ಹೇಳಬೇಕು.

ನಾಯಿಕೆಯ ವಿಶ್ವಾಸವು ನಾಯಕನ ಮೇಲೆ ಕೂಡ್ರಬೇಕೆಂದು ದಾಯಿಯ ಮಗಳು ಮೊದಲಾದವರು ವಿಶೇಷ ಪ್ರಕಾರದ ಉಪಾಯಗಳನ್ನು ಮಾಡಬೇಕು. ಆದರೆ ಸ್ಪಷ್ಟವಾದ ಭಾಷೆಯಲ್ಲಿ ಏನನ್ನೂ ಹೇಳಕೂಡದು. ಯಾಕಂದರೆ ನಾಯಿಕೆಯು ನಾಯಕನ ಮೇಲೆ ಅತಿಶಯವಾಗಿ ಅನುರಕ್ತಳಾಗಿದ್ದರೂ ಕೂಡ ನಾಯಕನು ಸ್ಪಷ್ಟವಾದ ಭಾಷೆಯಲ್ಲಿ ತನ್ನ ಸಂಭೋ

ಗೇಚ್ಛೆಯನ್ನು ವ್ಯಕ್ತಮಾಡಿದರೆ ನಾಯಿಕೆಯು ಅವನಿಗೆ ಎಂದೂ ವಶಳಾಗುವುದಿಲ್ಲ. ಎಂದು ಘೋಟಕಮುಖನು ಹೇಳುತ್ತಾನೆ. ಆದಕ್ಕಾಗಿಯೇ ಮೇಲೆ ವರ್ಣಿಸಿದ ಬೇರೆ ಬೇರೆ ವಿಧಾನಗಳಿಂದ ಅವಳನ್ನು ಅನುಕೂಲ ಮಾಡಿಕೊಳ್ಳಬೇಕೆಂದು ವಾತ್ಸ್ಯಾಯನನು ಹೇಳುತ್ತಾನೆ.

ಮೇಲೆ ವರ್ಣಿಸಿದ ಉಪಾಯಗಳಿಂದ ನಾಯಿಕೆಯು ಅನುಕೂಲಳಾದಳೆಂದು ತಿಳಿದು ಬಂದ ಮೇಲೆ, ಅವಳೊಂದಿಗೆ ವಿವಾಹವಾಗುವ ಸಿದ್ಧತೆಯನ್ನು ಮಾಡಬೇಕು. ಈ ವಿವಾಹ ವಿಧಿಯನ್ನು ಬೆಳಗು ಮುಂಜಾನೆ ಇಲ್ಲವೆ ರಾತ್ರಿಯಲ್ಲಿ ಮಾಡಬೇಕು. ಯಾಕೆಂದರೆ ಇಂತಹ ಸಮಯಗಳಲ್ಲಿಯೇ ಸ್ತ್ರೀಯರಿಗೆ ಅಂಜಿಕೆಯು ಕಡಿಮೆಯಾಗಿರುತ್ತದಲ್ಲದೆ, ಅವರು ಪ್ರೇಮಾಸಕ್ತರಾಗಿ ಸಂಭೋಗಕ್ಕೆ ಪ್ರವೃತ್ತರಾಗುತ್ತಾರೆ; ಪುರುಷರನ್ನು ಎಂದಿಗೂ ತಿರಸ್ಕರಿಸುವುದಿಲ್ಲ. ಆದಕ್ಕಾಗಿ ನಾಯಕನು ನಿರ್ದಿಷ್ಟ ಸಮಯದಲ್ಲಿಯೇ ಇಷ್ಟ ಕಾರ್ಯಕ್ಕಾಗಿ ಸ್ತ್ರೀಯರನ್ನು ಪ್ರವೃತ್ತಗೊಳಿಸಬೇಕು ಎಂದು ಪೂರ್ವಾಚಾರರು ಹೇಳುತ್ತಾರೆ.

> ಏಕಪುರುಷಾಭಿಯೋಗಾನಾಂ ತ್ವಸಂಭವೆ ಗೃಹೀತಾರ್ಥಯಾ ಧಾತ್ರೇಯಿಕಯಾ ಸಂಖ್ಯಾ ವಾ ತಸ್ಯಾಮಂತರ್ಭೂತಯಾ ತಮರ್ಥಮನಿರ್ವದಂತ್ಯಾ ಸಹೈನಾಮುಂಕಮಾನಾಯಯೇತ್ ತತೋ ಯಥೋಕ್ತಮಭಿಯುಂಜೀತ ||

ಒಬ್ಬನೇ ನಾಯಿಕೆಯನ್ನು ವಶಮಾಡಿಕೊಳ್ಳಲು ಇಂಥಹ ನಾಯಕನಿಗೆ ಸಾಧ್ಯವಾಗದಿದ್ದರೆ, ದಾಯಿಯ ಮಗಳಿಗೆ, ನಾಯಿಕೆಯ ಗೆಳತಿಗೆ ಅಥವಾ ನಾಯಿಕೆಯು ವಿಶೇಷವಾಗಿ ಯಾವ ಸ್ತ್ರೀಯ ಅಧೀನದಲ್ಲಿರುವಳೋ ಅವಳಿಗೆ ತನ್ನ ಮನೋಬಯಕೆಯನ್ನು ತಿಳಿಸಿ, ಅವಳಿಂದ ನಾಯಿಕೆಗೆ ಈ ಸಂಗತಿಯು ತಿಳಿಯದಂತೆ, ಬೇರೆ ನೆವದಿಂದ ನಾಯಿಕೆಯನ್ನು ತನ್ನ ಹತ್ತಿರ ತರಿಸಿಕೊಳ್ಳಬೇಕು. ಆ ಮೇಲೆ ಹಿಂದೆ ಹೇಳಿದಂತೆ ಅವಳನ್ನು ಅನುಕೂಲ ಮಾಡಿಕೊಳ್ಳುವ ಪ್ರಯತ್ನ ಮಾಡಬೇಕು. ಇಲ್ಲವೆ ತನ್ನಲ್ಲಿಯ ಓರ್ವ ದಾಸಿಯನ್ನು ಮೊದಲಿನಿಂದಲೇ ನಾಯಿಕೆಯ ಗೆಳೆತನವನ್ನು ಸಂಪಾದಿಸಲು ಇಟ್ಟು ಬಿಡಬೇಕು. ಅಂದರೆ ಅವಳು ಅಲ್ಲಿ ಇದ್ದು ನಾಯಕನ ಮೇಲೆ ನಾಯಿಕೆಯು ಆಸಕ್ತಳಾಗುವಂತೆ ಪ್ರಯತ್ನ ಮಾಡುವಳು.

ಯಜ್ಞದಲ್ಲಿ, ವಿವಾಹ ಸಮಾರಂಭದಲ್ಲಿ, ಜಾತ್ರೆಯ ಪ್ರಸಂಗದಲ್ಲಿ, ಯಾವುದಾದರೊಂದು ಉತ್ಸವದಲ್ಲಿ, ಸಂಕಟ ಸಮಯದಲ್ಲಿ ಇಲ್ಲವೆ ಎಲ್ಲ ಜನರು ತಮ್ಮ ತಮ್ಮ ಕೆಲಸಗಳಲ್ಲಿ ಮಗ್ನರಾಗಿದ್ದಾಗ, ನಾಯಿಕೆಯು ಒಬ್ಬಳೇ ಭೆಟ್ಟಿಯಾದರೆ ನಾಯಕನು ಅವಳನ್ನು ಅನುಕೂಲ ಮಾಡಿ ಕೊಳ್ಳುವ ಪ್ರಯತ್ನಮಾಡಬೇಕು.

ನ ಹಿ ದೃಷ್ಟಭಾವಾ ಯೋಷಿತೋ ದೇಶೆ ಕಾಲೆ ಚ ಪ್ರಯುಜ್ಯಮಾನಾ ವ್ಯಾವರ್ತಂತ ಇತಿ ವಾತ್ಸ್ಯಾಯನಃ ॥

ಯೋಗ್ಯಸ್ಥಳದಲ್ಲಿ, ಯೋಗ್ಯ ಸಮಯದಲ್ಲಿ ವಶಮಾಡಿಕೊಳ್ಳುವ ಪ್ರಯತ್ನ ಮಾಡಿದರೆ ನಾಯಿಕೆಯು ಎಂದೂ ಅಸಮ್ಮತಿಯನ್ನು ತೋರಿ ಸುವುದಿಲ್ಲವೆಂದು ವಾತ್ಸ್ಯಾಯನನ ಮತ.

ನಾಯಿಕೆಯು ಗುಣವತಿಯಿದ್ದಾಳೆ; ಆದರೆ ಕುಲವತಿಯಿಲ್ಲ. ನಾಯಿ-ಕೆಯು ಕುಲವತಿಯೂ ಇದ್ದಾಳೆ; ಗುಣವತಿಯೂ ಇದ್ದಾಳೆ; ಆದರೆ ದ್ರವ್ಯಹೀನಳಿದ್ದಾಳೆ. ಇಲ್ಲವೆ, ದ್ರವ್ಯ-ಕುಲ-ಗುಣ ಇವೆಲ್ಲವುಗಳಿಂದಲೂ ಯೋಗ್ಯಳಿದ್ದು ತಂದೆ-ತಾಯಿ ಮೊದಲಾದ ಹಿರಿಯರು ಇರದಿದ್ದರೆ, ಸಮಾನ ಕುಲಶೀಲದ ಜನರು ಆಕೆಗೆ ಬೇಡಿಕೆಯನ್ನೆ ಹಾಕುವುದಿಲ್ಲ. ಯಾವಳು ಉತ್ತಮ ಕುಲ ಸದ್ಗುಣಗಳಿಂದ ಕೂಡಿದ್ದರೂ ಲಗ್ನವಾಗದೆ ಋತುಮತಿಯಾಗಿ ತಾಯಿ ತಂದೆಗಳ ಮನೆಯಲ್ಲಿರುವಳೋ ಅವಳು ತಾನೇ ಸ್ವತಃ ನಾಯಕನ ಪಾಣಿಗ್ರಹಣಮಾಡಬೇಕು. "ಕನ್ಯೆಯು ತಂದೆ ತಾಯಿಗಳ ಮನೆಯಲ್ಲಿಯೇ ಲಗ್ನವಾಗದೆ ಋತುಮತಿಯಾದರೆ, ಮೂರು ವರುಷಗಳ ವರೆಗೆ ತಂದೆ ತಾಯಿಗಳು ತನ್ನ ವಿವಾಹವನ್ನು ಮಾಡುವರೆಂದು ಅವ ಲಂಬಿಸಬೇಕಲ್ಲದೆ, ಆ ನಂತರ ತನಗೆ ಅನುರೂಪನಾದ ವರನ್ನು ತಾನೇ ಶೋಧಿಸಿ ಲಗ್ನಮಾಡಿಕೊಳ್ಳಬೇಕೆ"ಂದು ಮನುವು ಹೇಳಿರುವನು.

ಅನುರೂಪನಾದ ವರನನ್ನು ದೊರಕಿಸಿಕೊಳ್ಳುವ ಉಪಾಯಗಳು ಕೆಳಗಿನಂತಿವೆ :—

ಗುಣವಂತ, ಬಲವಂತ ಮತ್ತು ರೂಪವಂತನಾದ ನಾಯಕನನ್ನು ಚಿಕ್ಕಂದಿನಲ್ಲಿಯೇ ಕೂಡಿದ ಸ್ನೇಹದಿಂದ ವಶಪಡಿಸಿಕೊಳ್ಳಬೇಕು. ಇಲ್ಲವೆ

ಯಾವನು ಮನೋನಿಗ್ರಹ ಮಾಡಲು ಅಸಮರ್ಥನಿರುವನು, ಯಾವನು ತಂದೆ ತಾಯಿಗಳ ವಿಚಾರವನ್ನು ಕೇಳದೆ, ತನ್ನ ಇಚ್ಛೆಗನುಸಾರವಾಗಿ ಪ್ರೇಮಾಸಕ್ತನಾಗುವನೋ ಅಂಥ ನಾಯಕನಿಗೆ ನಾಯಿಕೆಯು ಪ್ರಿಯ ಹಾಗೂ ಹಿತಕರವಾದ ಉಪಚಾರಗಳಿಂದ ಮತ್ತುಮೇಲಿಂದಮೇಲೆ ದೃಷ್ಟಿಗೆ ಬಿದ್ದು ಅವನನ್ನು ವಶಪಡಿಸಿಕೊಳ್ಳಬೇಕು. ನಾಯಿಕೆಯ ತಾಯಿ, ಗೆಳತಿ ಇಲ್ಲವೆ ದಾಯಿಯು ಮಗಳು ನಾಯಿಕೆಯು ನಾಯಕನ ದೃಷ್ಟಿಗೆ ಬೀಳುವಂತೆ ಪ್ರಯತ್ನ ಮಾಡಬೇಕು. ಹೂ, ತಾಂಬೂಲ ಇಲ್ಲವೆ ಸುಗಂಧಿ ಸಾಮಾನುಗಳನ್ನು ಕೊಟ್ಟು ಕತ್ತಲೆಯಾದ ನಂತರ ನಾಯಿಕೆಯನ್ನು ನಾಯಕನ ಕಡೆಗೆ ಏಕಾಂತದಲ್ಲಿ ಕಳುಹಿಸಬೇಕು. ನಾಯಿಕೆಯು ಅವನೆಡೆಗೆ ಹೋದಬಳಿಕ ತನ್ನ ಕಲಾಕೌಶಲ್ಯದ ಪ್ರದರ್ಶನ ಮಾಡಬೇಕು; ಮೈ ತಲೆ ತಿಕ್ಕುವುದರಲ್ಲಿಯು ತನ್ನ ಪ್ರಾವಿಣ್ಯವನ್ನು ಅವನಿಗೆ ತೋರಿಸಬೇಕು. ನಾಯಕನನ್ನು ವಶಮಾಡಿಕೊಳ್ಳಲು ಉಪಯೋಗವಾಗಬಹುದಾದ ಎಲ್ಲ ಸಂಗತಿಗಳನ್ನು ಮಾಡಬೇಕು. ಹಿಂದೆ ನಾಯಕನು ನಾಯಿಕೆಯನ್ನು ವಶಮಾಡಿಕೊಳ್ಳಲು ಯಾವ ಯಾವ ಉಪಾಯಗಳನ್ನು ಹೇಳಲಾಗಿದೆಯೋ ಅವುಗಳೊಳಗಿನ ಕೆಲವೊಂದು ಉಪಾಯಗಳನ್ನು ನಾಯಿಕೆಯು ಆಚರಣೆಯಲ್ಲಿ ತರಬೇಕು. ಕಾಮಾತುರತೆಯು ಅತಿಶಯವಾಗಿದ್ದರೂ ಕೂಡ ನಾಯಿಕೆಯು ತಾನಾಗಿಯೇ ಮುಂದುವರೆದು ನಾಯಕನ ಚುಂಬನ ಮೊದಲಾದವುಗಳನ್ನು ತೆಗೆದುಕೊಳ್ಳಲು ಪ್ರವೃತ್ತಳಾಗಬಾರದು. ಯಾಕೆಂದರೆ ತಾನಾಗಿಯೇ ನಾಯಕನ ಚುಂಬನ ತಗೆದುಕೊಳ್ಳಲು ಪ್ರವೃತ್ತಳಾದ ನಾಯಿಕೆಯು ನಾಯಕನ ತಿರಸ್ಕಾರಕ್ಕೆ ಕಾರಣಳಾಗುತ್ತಾಳೆಂಬುದು ಎಲ್ಲ ಆಚಾರ್ಯರ ಮತವಿದೆ. ನಾಯಕನು ಚುಂಬನ ಮೊದಲಾದವುಗಳನ್ನು ತೆಗೆದುಕೊಳ್ಳಲು ಆರಂಭಿಸಿದರೆ, ಅದಕ್ಕೆ ಅನುಕೂಲತೆಯನ್ನು ತೋರಿಸಬೇಕು. ನಾಯಕನು ತೊಡೆಯ ಮೇಲೆ ಕೂಡ್ರಿಸಿಕೊಂಡರೆ ನಾಯಿಕೆಯು ಅಸಮ್ಮತಿಯನ್ನು ಪ್ರದರ್ಶಿಸಬಾರದು. ಆಲಿಂಗನವನ್ನು ಕೊಟ್ಟನಂತರ ನಾಯಕನು ಆನಂದವನ್ನು ವ್ಯಕ್ತಪಡಿಸಿದರೆ, ಅದರ ಬಗ್ಗೆ ತನಗೆ ವಿಶೇಷವಾಗಿ ಏನೂ ತಿಳಿಯಲೇಯಿಲ್ಲವೆಂಬಂತೆ ಅದನ್ನು ಸ್ವೀಕರಿಸಬೇಕು. ನಾಯಕನಿಗೆ ಚುಂಬನವನ್ನು ತೆಗೆದುಕೊಳ್ಳಲು ಪ್ರಯಾಸವಾಗುವಂತೆ, ಸುಳ್ಳು ನಕಾರದ ನಟನೆಯೊಂದಿಗೆ ಮೈಯನ್ನು ಹೊರಳಿಸುತ್ತಿರಬೇಕು.

ಆದಕ್ಕಾಗಿ ನಾಯಕನು ತಾನು ಬಲಾತ್ಕಾರ ಮಾಡುತ್ತಿರುವೆನೆಂಬ ಭಾವನೆಯು ಅವನಲ್ಲಿ ಹುಟ್ಟುವಂತೆ ವರ್ತಿಸಬೇಕು.

**ರತಿಭಾವನಾಮಭ್ಯರ್ಥ್ಯಮಾನಾಯಾಃ ಕೃಚ್ಛ್ರಾದ್ ಗುಹ್ಯಸಂಸ್ಪರ್ಶನಮ್ ॥**

ಸಂಭೋಗವಾಸನೆಯನ್ನು ಉತ್ಪನ್ನಮಾಡುವದಕ್ಕಾಗಿ ನಾಯಕನು ತನ್ನ ಗುಹ್ಯೇಂದ್ರಿಯನ್ನು ಸ್ಪರ್ಶಿಸಲು ವಿನಂತಿಮಾಡಿದರೆ, ನಾಯಿಕೆಯು ಅದನ್ನು ಬಹಳ ಕಷ್ಟದಿಂದ ಸ್ಪರ್ಶಿಸಬೇಕು. ನಾಯಕನು ಸಂಪೂರ್ಣವಾಗಿ ತನ್ನ ಮೇಲೆಯೇ ಆಸಕ್ತನಾಗಿರುವನೆಂಬುವದನು ಪೂರ್ಣವಾಗಿ ಮನವರಿಕೆ ಮಾಡಿಕೊಳ್ಳದ ಹೊರತು ತನ್ನ ಸಂಭೋಗ ವಿಷಯದ ಮನೋಭಾವವನ್ನು ವ್ಯಕ್ತಪಡಿಸಬಾರದು. ನಾಯಕನು ತನ್ನ ಮೇಲೆ ಪೂರ್ಣವಾಗಿ ಆಸಕ್ತನಾಗಿದ್ದಾನೆ. ಇನ್ನು ತನ್ನನ್ನು ಬಿಟ್ಟುಕೊಡಲು ಸಾಧ್ಯವಿಲ್ಲ. ಎಂಬುದು ಯಾವಾಗ ನಾಯಿಕೆಗೆ ನಿಶ್ಚಯವಾಗುವುದೋ ಆಗ ತನ್ನನ್ನು ವಿನಂತಿಸಿಕೊಳ್ಳುತ್ತಿರುವ ನಾಯಕನಿಗೆ ಸಂಭೋಗ ಮಾಡುವ ವಿಷಯದಲ್ಲಿ ಉತ್ಸಾಹವನ್ನು ತೋರಿಸಬೇಕು.

**ವಿಮುಕ್ತಕನ್ಯಾಭಾವಾ ಚ ವಿಶ್ವಾಸ್ಯೇಷು ಪ್ರಕಾಶಯೇದಿತಿ ಪ್ರಯೋಜ್ಯಸ್ಯೋಪಾವರ್ತನಮ್ ॥**

ಹೀಗೆ ತನ್ನನ್ನು ಬಿಟ್ಟುಕೊಡಲಾರನೆಂದು ಮನದಟ್ಟಾದ ನಾಯಕನ ಜೊತೆಗೆ ಆದ ಸಮಾಗಮದನಂತರ, ತನ್ನದೂ ಮತ್ತು ನಾಯಕನದೂ ಗಾಂಧರ್ವವಿಧಿಯಿಂದ ವಿವಾಹ ವಾಯಿತೆಂದು ತನ್ನ ಜೀವದ ಗೆಳತಿ, ದಾಸಿಯ ಮಗಳು ಮೊದಲಾದವರಿಗೆ ಹೇಳಬೇಕು.

ನಾಯಿಕೆಯು ನಾಯಕನನ್ನು ವಶಮಾಡಿಕೊಳ್ಳಲು ಪ್ರಯತ್ನಿಸುತ್ತಿರುವಾಗ ಬೇರೆ ಜನರು ಅವಳಿಗೆ ತೊಂದರೆಕೊಡಹತ್ತಿದರೆ ಏನು ಮಾಡಬೇಕೆಂಬ ಬಗ್ಗೆ ಕೆಳಗಿನ ಪ್ರಾಚೀನ ಶ್ಲೋಕಗಳು ಪ್ರಸಿದ್ಧವಿದೆ.

**ಕನ್ಯಾಭಿಯುಜ್ಯಮಾನಾ ತು ಯಂ ಮನ್ಯೇತಾಶ್ರಮಂ ಸುಖಮ್ ।**
**ಅನುಕೂಲಂ ಚ ವಶ್ಯಂ ಚ ತಸ್ಯ ಕುರ್ಯಾತ್ಪರಿಗ್ರಹಮ್ ॥**

ಅನೇಕ ಜನ ನಾಯಕರು ನಾಯಿಕೆಯನ್ನು ಅನುಕೂಲ ಮಾಡಿಕೊಳ್ಳಲು ಪ್ರಯತ್ನಿಸಹತ್ತಿದರೆ, ಯಾವ ನಾಯಕನು ತನಗೆ ಕೊನೆಯ

ವರೆಗೆ ಆಧಾರಕೊಡಬಲ್ಲ; ಯಾವನು ತನಗೆ ಸುಖಕೊಡಬಲ್ಲ; ಮತ್ತು ಯಾವನು ತನ್ನ ಇಚ್ಛೆಯಂತೆ ನಡೆಯಬಲ್ಲನೆಂದು ಮನವರಿಕೆಯಾಗುವುದೋ ಆ ನಾಯಕನ ಜೊತೆಗೆ ಆಕೆಯು ವಿವಾಹವಾಗಬೇಕು. ನಾಯಕನ ಪ್ರಥಮ ವಿವಾಹವಾಗಿ, ಪ್ರಥಮ ಸ್ತ್ರೀ ಇದ್ದರೂ ಕೂಡ ಶ್ರೀಮಂತನೆಂದು ಕಂಡು ಬಂದರೆ, ಅವನ ಗುಣ-ಶೀಲ-ರೂಪಗಳ ವಿಚಾರ ಮಾಡದೆ ನಾಯಿಕೆಯು ಅವನನ್ನು ವರಿಸಬೇಕೆಂದು ಸೂತ್ರಕಾರರು ಹೇಳುತ್ತಾರೆ.

ಉತ್ತಮ ಗುಣಗಳುಳ್ಳವ, ಅನುಕೂಲನಿದ್ದವ, ಸಮರ್ಥನಾದವ, ವಿವಾಹದ ಅವಶ್ಯಕೆಯುಳ್ಳವ ಮತ್ತು ಅನೇಕ ಚತುರೋಪಾಯಗಳಿಂದ ತನ್ನನ್ನು ವಶಪಡಿಕೊಳ್ಳಲು ಇಚ್ಛಿಸುವ ನಾಯಕನ ವಿರುದ್ಧ ನಾಯಿಕೆಯು ವರ್ತಿಸಕೂಡದು. ಧನಾಢ್ಯ, ಬಹುಜನ ಪತ್ನಿಯರುಳ್ಳವ, ಮತ್ತು ಸುಗುಣನಿದ್ದು, ತನಗೆ ಅನುಕೂಲವಾಗಿ ವರ್ತಿಸುವುದಿಲ್ಲ—ತನ್ನ ವಶವಲ್ಲಿರುವುದಿಲ್ಲ, ಅಂಥ ನಾಯಕನು ಎಷ್ಟೇ ವಿನಂತಿಯನ್ನು ಮಾಡಿಕೊಂಡರೂ ನಾಯಿಕೆಯು ಅವನಿಗೆ ನಕಾರವನ್ನೇ ಕೊಡಬೇಕು. ಇದರ ವಿಷಯವಾಗಿ ಸೂತ್ರಕಾರರ ಮತವು ಕೆಳಗಿನಂತಿದೆ.

ನಾಯಕನು ಧನಹೀನ ಆದರೂ ಸ್ವಾಧೀನ; ಗುಣಹೀನನಾದರೂ ಕುಟುಂಬವನ್ನು ಪೋಷಿಸಲು ಸಮರ್ಥನಾದಂಥ ನಾಯಕನನ್ನು ವಿವಾಹವಾಗುವುದುದು ಒಂದು ರೀತಿಯಿಂದ ಉತ್ತಮ. ಆದರೆ ಗುಣವಂತನಿದ್ದು ಅನೇಕ ಸ್ತ್ರೀಯರ ಮೇಲೆ ಪ್ರೇಮವಮಾಡುವ ನಾಯಕನನ್ನು ನಾಯಿಕೆಯು ಎಂದೂ ವರಿಸಬಾರದು. ನಾಯಕನು ನಾಯಿಕೆಯ ಜತೆಗೆ ಅನುಕೂಲವಾಗಿ ವರ್ತಿಸದಿದ್ದರೆ, ಬಹಳ ಅನರ್ಥಗಳಾಗುತ್ತವೆ.

ಶ್ರೀಮಂತ ಜನರು ತಮ್ಮ ಶ್ರೀಮಂತಿಕೆಯ ಬಲದಿಂದ ಸ್ತ್ರೀಯರ ಪ್ರೇಮವನ್ನು ಲಕ್ಷ್ಯಕ್ಕೆ ತರದೆ, ಗುಲಾಮರ ಪೇಟೆಯಲ್ಲಿ ಅವರನ್ನು ಕೊಳ್ಳುವಂತೆ, ಅನೇಕ ಸ್ತ್ರೀಯರನ್ನು ವಿವಾಹವಾಗುತ್ತಾರೆ. ಆದರೆ ಆ ಎಲ್ಲ ಸ್ತ್ರೀಯರಿಗೆ ಊಟ–ಉಪಚಾರಗಳಂತಹ ಬಾಹ್ಯಸುಖವು ಬೇಕಾದಷ್ಟು ಸಿಗುತ್ತಿದ್ದರೂ ರತಿಸುಖವು ಸಿಕ್ಕದೆ ಕಾಮಶಾಂತಿಯಾಗದ್ದರಿಂದ ಅವರು ಸ್ವೈರಾಚಾರಿಣಿಯರಾಗುತ್ತಾರೆಂದು ವಾತ್ಸ್ಯಾಯನನು ಹೇಳುತ್ತಾನೆ.

ಅಧಮಜಾತಿಯ, ವೃದ್ಧ ಮತ್ತು ನಿತ್ಯವೂ ಪ್ರವಾಸ ಮಾಡುವ ನಾಯಕನ ಜೊತೆಗೆ ಯಾವ ನಾಯಿಕೆಯೂ ಲಗ್ನ ಮಾಡಿಕೊಳ್ಳಬಾರದು.

ಲಗ್ನಮಾಡಿಕೊಳ್ಳಲು ಬಲಾತ್ಕರಿಸುವ, ಡಂಭಾಚಾರವನ್ನು ತೋರುವ ಮತ್ತು ಜೂಜಾಡುವ ನಾಯಕನು ಲಗ್ನಕ್ಕೆ ಅಯೋಗ್ಯರು. ಮೇಲೆ ಹೇಳಿದ ಗುಣಗಳಿಂದ ಯುಕ್ತವಾದ, ಆದರೆ ಅನುಕೂಲತೆಯಿಂದ ವರ್ತಿಸುವ ನಾಯಕನ ಜೊತೆಗೆ ವಿವಾಹವಾಗಲು ಅಡ್ಡಿಯಿಲ್ಲ. ಈ ವಿಷಯವಾಗಿ ಸೂತ್ರಕಾರರ ಅಭಿಪ್ರಾಯವು ಕೆಳಗಿನಂತಿದೆ.

ನಾಯಿಕೆಯನ್ನು ವಶಪಡಿಸಿಕೊಳ್ಳಲು ಅನೇಕ ನಾಯಕರಲ್ಲಿ ಕೆಲವು ಗುಣಗಳ ಸಾಮ್ಯವಿದ್ದರೂ ಕೂಡ ಅವರಲ್ಲಿ ಯಾವನು ಮುಂದೆ ಬಂದು ನಾಯಿಕೆಗೆ ಬೇಡಿಕೆಯನ್ನು ಹಾಕುತ್ತಾನೆಯೋ ಅವನನ್ನೇ ವಿವಾಹವಾಗುವನು ಹೆಚ್ಚುಯೋಗ್ಯವಾದನು. ಯಾಕಂದರೆ ಸ್ವತಃ ನಾಯಿಕೆಗೆ ಬೇಡಿಕೆಯನ್ನು ಹಾಕಿ, ವಶಮಾಡಿಕೊಳ್ಳಲು ಪ್ರಯತ್ನಿಸುವ ನಾಯಕನ ಮನೋವೃತ್ತಿಯಲ್ಲಿ ನಾಯಿಕೆಯ ವಿಷಯಕ್ಕೆ ಪ್ರೇಮ ಉತ್ಪನ್ನವಾಗಿರುವುದರಿಂದ, ಅವನು ಉಳಿದೆಲ್ಲ ನಾಯಕರಿಗಿಂತ ಶ್ರೇಷ್ಠನು.

---

## ಅಧ್ಯಾಯ : ೫

# ವಿವಾಹಯೋಗ ಪ್ರಕರಣ

ಹಿಂದಿನ ಅಧ್ಯಾಯದಲ್ಲಿ ಹೇಳಿದಂತೆ ಯಾವ ನಾಯಿಕೆಯು ಅನುಕೂಲಳಾಗಿ ಸ್ವಯಂವರಕ್ಕೆ ಪ್ರವೃತ್ತಳಾಗಿರುವಳೋ ಅವಳ ಜೊತೆಗೆ ಗಾಂಧರ್ವವಿಧಿಯಿಂದ ವಿವಾಹವಾಗಬೇಕು. ಯಾವಳು ಅನುಕೂಲಳಾಗುವುದಿಲ್ಲವೋ ಅವಳ ಜೊತೆಗೆ ಅಸುರಾದಿ ಮೊದಲಾದ ವಿವಾಹ ಪ್ರಕಾರಗಳಲ್ಲಿ ಯಾವುದಾದರೊಂದು ವಿವಾಹ ಪ್ರಕಾರದಿಂದ ಲಗ್ನವಾಗಬೇಕು. ಅದಕ್ಕಾಗಿ ಮೊದಲಿಗೆ ಈ ವಿವಾಹ ಪ್ರಕಾರಗಳನ್ನು ಅರಿತುಕೊಳ್ಳುವುದು ಅವಶ್ಯವಿರುವುದರಿಂದ ಸೂತ್ರಕಾರರು ಅದನ್ನೇ ಮೊದಲಿಗೆ ಹೇಳುತ್ತಾರೆ. ಒಬ್ಬೊಂಟಿಗರಾಗಿ ಭೆಟ್ಟಿಯಾಗುತ್ತಿರುವ ನಾಯಿಕೆಯರ ಜೊತೆಗೆ ಗಾಂಧರ್ವವಿಧಿಯಿಂದ ವಿವಾಹವಾಗುವುದು ಶಕ್ಯವಿರುತ್ತದೆ. ಈ ಮೊದಲೇ ಅವರ ಮನೋವೃತ್ತಿಯು ಸರ್ವಸಾಧಾರಣವಾಗಿ ಅನುಕೂಲವಾಗಿರುವುದರಿಂದ ಅವರನ್ನು ಏಕಾಂತ ಸ್ಥಳದಲ್ಲಿ ಕರೆದೊಯ್ಯಲು

ಅನುಕೂಲವಾಗುವುದು. ಇದಕ್ಕೆ ವಿರುದ್ಧವಾಗಿ ಯಾವ ನಾಯಿಕೆಯರು ಒಬ್ಬೊಂಟಿಗರಾಗಿ ಏಕಾಂತದಲ್ಲಿ ಭೆಟ್ಟಿಯಾಗಲು ಅಸಮರ್ಥರಾಗುತ್ತಾರೋ ಅಂಥವರನ್ನು ವಶಮಾಡಿಕೊಳ್ಳಲು ಬೇರೆಯವರ ಸಹಾಯವನ್ನು ಅಪೇಕ್ಷಿಸಬೇಕಾಗುತ್ತದೆ. ಈ ಸಹಾಯವನ್ನು ಯಾರಿಂದ ಮತ್ತು ಹೇಗೆ ತೆಗೆದುಕೊಳ್ಳಬೇಕೆಂಬುವನ್ನು ಸೂತ್ರಕಾರರು ಮುಂದಿನಂತೆ ಹೇಳುತ್ತಾರೆ.

**ಪ್ರಾಚುರ್ಯೇಣ ಕನ್ಯಾಯಾ ವಿವಿಕ್ತದರ್ಶನಸ್ಯಾಲಾಭೇ ಧಾತ್ರೇಯಿಕಾಂ ಪ್ರಿಯಹಿತಾಭ್ಯಾಮುಪಗೃಹ್ಯೋಪಸರ್ಪೇತ್ ॥**

ನಾಯಿಕೆಯು ಏಕಾಂತಸ್ಥಳದಲ್ಲಿ ಒಬ್ಬಳೇ ಮೇಲಿಂದ ಮೇಲೆ ಭೆಟ್ಟಿಯಾಗದಿದ್ದರೆ, ದಾಯಿಯ ಮಗಳಿಗೆ ಪ್ರಿಯ ಹಾಗು ಹಿತಕರವಸ್ತುಗಳಿಂದ ಅನುಕೂಲ ಮಾಡಿಕೊಂಡು ನಾಯಿಕೆಯ ಕಡೆಗೆ ಕಳುಹಿಸಬೇಕು. ಈ ದಾಯಿಯ ಮಗಳು ತನಗೆ ನಾಯಕನ ಪರಿಚಯವೇ ಇಲ್ಲವೆಂಬುವಂತೆ ವರ್ತಿಸಿ, ನಾಯಿಕೆಯ ಮುಂದೆ ನಾಯಕನ ಗುಣಗಳ ವರ್ಣನೆಯನ್ನು ಮಾಡಿ ಅವಳು ನಾಯಕನ ಮೇಲೆ ಅನುರಕ್ತಳಾಗುವಂತೆ ಮಾಡಬೇಕು. ನಾಯಿಕೆಗೆ ಸೇರಿಕೆಯಾಗಬಹುದಾದ ನಾಯಕನ ಎಲ್ಲ ಗುಣಗಳನ್ನು ಸವಿಸ್ತಾರವಾಗಿ ವರ್ಣಿಸಬೇಕು. ಅದರಂತೆ ನಾಯಿಕೆಗೆ ತಿರಸ್ಕಾರ ಉಂಟಾಗಬಹುದಾದ ಅನ್ಯನಾಯಕರ ದೋಷಗಳನ್ನು ಎತ್ತಿ ತೋರಿಸಬೇಕು. ಮತ್ತು ಮನಶ್ಚಾಂಚಲ್ಯಗಳನ್ನೂ ಎತ್ತಿ ತೋರಿಸಬೇಕು. ಹೀಗೆಯೇ "ನಿನ್ನಂತೆಯೇ ಇದ್ದ ಶಕುಂತಲೆ ಮೊದಲಾದ ಎಷ್ಟೋ ಕನ್ನೆಯರು ತಮ್ಮ ಇಚ್ಛಾನುಸಾರವಾಗಿ ಅನುರೂಪರಾದ ಗಂಡಂದಿರನ್ನು ಹುಡುಕಿ, ಅವರ ಜೊತೆಗೆ ವಿವಾಹ ಮಾಡಿಕೊಂಡು ಸುಖಿಯಾದರು" ಎಂದು ಇದರಂತೆ ಅನೇಕ ಉದಾಹರಣೆಗಳನ್ನು ಹೇಳಬೇಕು. ತಂದೆಯ ಆಶೆಬುರುಕ ತನಕ್ಕೆ ಬಲಿಬಿದ್ದ ಎಷ್ಟೋ ಕುಮಾರಿಕೆಯರು ದೊಡ್ಡ ಶ್ರೀಮಂತರ ಪತ್ನಿಯರಾಗಿದ್ದರೂ ಸವತಿಯ ಮತ್ಸರದಿಂದ ದೂಷಿತರಾಗಿ ಗಂಡನಿಗೆ ಅಪ್ರಿಯರಾಗುತ್ತಾರಲ್ಲದೆ, ಅವನು ಬಿಟ್ಟುಕೊಟ್ಟುದುದರಿಂದ ಸದಾ ದುಃಖವನ್ನನುಭವಿಸುತ್ತಾರೆ. ಇದರಂತೆಯೆ ತಂದೆಯ ಇಚ್ಛೆಯ ಮೇರೆಗೆ ಅವನು ಹುಡುಕಿದ ವರನನ್ನು ವಿವಾಹವಾಗುವುದರಿಂದ ಭಾವೀ ಜೀವನದಲ್ಲಿ ಸಂಭವಿಸಬಹುದಾದ ಸಂಗತಿಗಳನ್ನು ಸ್ಪಷ್ಟವಾಗಿ ನಾಯಿಕೆಗೆ ತಿಳಿಸಿ ಹೇಳಬೇಕು.

**ಸುಖಮನುಪಗತಮೇಕಚಾರಿಕಾಯಾಂ ನಾಯಕಾನುರಾಗಂ ಚ ವರ್ಣಯೇತ್ ॥**

ನಾಯಕನು ಏಕಪತ್ನಿವ್ರತವನ್ನು ಆಚರಿಸುತ್ತಿದ್ದರೆ ಅಂತಹ ಸ್ಥಿತಿಯಲ್ಲಿ ನಾಯಿಕೆಗೆ ಅಖಂಡವಾದ ಸುಖವು ಸಿಗುತ್ತದಲ್ಲದೆ, ನಾಯಕನ ಪ್ರೇಮವೂ ಅವಳ ಮೇಲೆಯೇ ಕೂಡ್ರುವುದು. ಇದನ್ನು ದಾಯಿಯ ಮಗಳು ನಾಯಿಕೆಗೆ ವರ್ಣಿಸಿ ಹೇಳಬೇಕು. ಈ ವರ್ಣನೆಗಳಿಂದ ನಾಯಿಕೆಯು ಸ್ವಲ್ಪ ಅನುಕೂಲಳಾದರೂ ಕೂಡ ಕೆಲವು ಕಾರಣಗಳ ಮೂಲಕ ಅಂಜಿಕೆಯೂ ನಾಚಿಕೆಯೂ ಹುಟ್ಟಿ, ಬಹುತರವಾಗಿ ಇದರಿಂದ ತನ್ನ ನಾಶವಾಗಬಹುದೆಂದು ಅವಳಿಗೆ ಸಂಶಯ ಬಂದರೆ, ಅನೇಕ ಉಪಾಯಗಳಿಂದ ಈ ಎಲ್ಲ ಆತಂಕಗಳನ್ನು ದೂರಮಾಡಬೇಕು. ಪರದಾರಿಕ ಪ್ರಕರಣದಲ್ಲಿ ತಿಳಿಸಿದ ಎಲ್ಲ ದೂತಿಯ ಕಾರ್ಯಗಳನ್ನು ದಾಯಿಯ ಮಗಳು ಇಲ್ಲಿ ಆಚರಣೆಯಲ್ಲಿ ತರಬೇಕು.

ನಿನಗೆ ಗೊತ್ತಾಗದಂತೆ ನಾಯಕನು ಒಮ್ಮೆಲೇ ಬಲಾತ್ಕಾರದಿಂದ ನಿನ್ನನ್ನು ಒಯ್ಯಬಹುದು; ಮತ್ತು ಹೀಗಾಗುವುದರಿಂದ ನಿನ್ನ ಮೇಲೆ ಯಾವ ದೋಷವೂ ಬರಲಾರದು. ಆದ್ದರಿಂದ ಎಲ್ಲವೂ ಸುವ್ಯವಸ್ಥಿತವಾಗುವುದು. ಹೀಗೆ ದಾಯಿಯ ಮಗಳು ಕೊನೆಯ ಉಪಾಯವನ್ನು ಯೋಜಿಸಬೇಕು.

ಮೇಲೆ ಹೇಳಿದ ಉಪಾಯಗಳಿಂದ ನಾಯಿಕೆಯು ಅನುಕೂಲಳಾಗಿ ಏಕಾಂತಸ್ಥಳದಲ್ಲಿ ಬಂದರೆ, ನಾಯಕನು ವೈದಿಕ ಬ್ರಾಹ್ಮಣರ ಮನೆಯಿಂದ ಅಗ್ನಿಯನ್ನು ತಂದು, ಸ್ಮೃತಿ ಶಾಸ್ತ್ರಾನುಸರಿಸಿ ಹೋಮವನಾಡಿ, ನಾಯಿಕೆಗೆ ಅಗ್ನಿಯ ಸುತ್ತಲೂ ಮೂರು ಪ್ರದಕ್ಷಿಣೆ ಹಾಕಿಸಿ ಅಗ್ನಿಸಾಕ್ಷಿಯಾಗಿ ವಿವಾಹ ಮಾಡಿಕೊಳ್ಳಬೇಕು. ಅನಂತರ ನಾಯಿಕೆಯ ತಂದೆ ತಾಯಿಗಳಿಗೆ ದೂತಿಯ ಮುಖಾಂತರ ಈ ಸುದ್ದಿಯನ್ನು ತಿಳಿಸಬೇಕು. ಯಾಕೆಂದರೆ ಒಮ್ಮೆ ಅಗ್ನಿಸಾಕ್ಷಿಯಾದ ಆ ವಿವಾಹವು ಹಿಂದೂ ಧರ್ಮಶಾಸ್ತ್ರದ ಮೇರೆಗೆ ಎಂದೂ ಬದಲಿಸಲು ಬರುವುದಿಲ್ಲ. ಎಂದು ಎಲ್ಲ ಆಚಾರ್ಯರ ಮತವಿದೆ.

**ದೂಷಯಿತ್ವಾ ಚೈನಾಂ ಶನೈಃ ಸ್ವಜನೇ ಪ್ರಕಾಶಯೇತ್ ॥**

ನಾಯಿಕೆಯ ಜೊತೆಗೆ ಸಮಾಗಮವಾದ ನಂತರ ಯುಕ್ತಿಯಿಂದ ಅವಳ ಎಲ್ಲ ಆಪ್ತಜನರಿಗೆ ಈ ಸಂಗತಿಯನ್ನು ತಿಳಿಸಬೇಕು. ಕುಲಾಪವಾದಕ್ಕೂ ರಾಜದಂಡಕ್ಕೂ ಹೆದರಿ ನಾಯಿಕೆಯ ಆಪ್ತಜನರು ನಾಯಿಕೆಯನ್ನು ತನಗೇ ಕೊಟ್ಟು ಸಾರ್ವಜನಿಕವಾಗಿ ವಿವಾಹ ಜರುಗಿಸುವಂತೆ ನಾಯಕನು ಒಂದು ಯೋಜನೆಯನ್ನು ಸಿದ್ಧಮಾಡಬೇಕು. ಆ ಮೇಲೆ ಪ್ರೇಮಪೂರ್ವಕವಾಗಿ ಕಾಣಿಕೆಯೆಂದು ಕೆಲವು ವಸ್ತುಗಳನ್ನು ಕೊಟ್ಟು, ಇಲ್ಲವೆ ಆತ್ಮೀಯತೆಯನ್ನು ತೋರಿಸಿ ನಾಯಿಕೆಯ ಆಪ್ತಜನರನ್ನು ಸಂತೋಷಗೊಳಿಸಬೇಕು.

ಮೇಲೆ ಹೇಳಿದ ಉಪಾಯಗಳಿಂದ ನಾಯಿಕೆಯು ಅನುಕೂಲವಾಗುತ್ತಿರದಿದ್ದರೆ, ನಾಯಕನ ಮೇಲೆ ಆದರ ಉಳ್ಳವಳೂ, ಕುಲಪತಿಯೂ ಇದ್ದು, ನಾಯಿಕೆಯ ಮನೆಯಲ್ಲಿ ಎಲ್ಲಿ ಬೇಕಾದಲ್ಲಿಯಾದರೂ ಹೋಗಬಲ್ಲ ಒಬ್ಬ ಹೆಂಗಸಿಗೆ ದೂತಿಯ ಕೆಲಸವನ್ನು ಹೇಳಿ, ಆಕೆಯ ಮುಖಾಂತರವಾಗಿ ಯಾವುದೋ ಒಂದು ಬೇರೆ ಕಾರ್ಯ ನಿಮಿತ್ತದಿಂದ ಸಹಜವಾಗಿ, ಆ ಮೇಲೆ ಹಿಂದಿನ ಸೂತ್ರದಲ್ಲಿ ಹೇಳಿದಂತೆ ವೈದಿಕ ಬ್ರಾಹ್ಮಣನ ಮನೆಯಲ್ಲಿಂದ ಅಗ್ನಿಯನ್ನು ತಂದು ಯಥಾವಿಧಿಯಾಗಿ ಅವಳ ಜೊತೆಗೆ ವಿವಾಹವಾಗಬೇಕು.

ನಾಯಿಕೆಯ ವಿವಾಹವು ಅನ್ಯವರನ ಜೊತೆಗೆ ಶೀಘ್ರದಲ್ಲಿಯೇ ಆಗುವುದಿದ್ದರೆ, ನಾಯಿಕೆಯ ತಾಯಿಗೆ ಆಕೆಯ ಭಾವೀ ಅಳಿಯನ ದೋಷಗಳನ್ನು ಹೇಳಿ ಪಶ್ಚಾತ್ತಾಪವನ್ನು ಹುಟ್ಟಿಸಬೇಕು. ಆ ಮೇಲೆ ನಾಯಿಕೆಯ ಸಮ್ಮತಿಯ ಮೇರೆಗೆ ನೆರೆಮನೆಯವರ ಮನೆಗೆ ನಾಯಕನ್ನು ಕರೆತಂದು, ವೈದಿಕ ಬ್ರಾಹ್ಮಣನಲ್ಲಿಯ ಅಗ್ನಿಯನ್ನು ತಂದು ಅಗ್ನಿಯ ಸಮಕ್ಷಮದಲ್ಲಿ ಯಥಾವಿಧಿಯಾಗಿ ವಿವಾಹ ಮಾಡಿಸಬೇಕು. ಅಥವಾ ನಾಯಿಕೆಯ ಸಮವಯಸ್ಸಿನವಳಾದ ವೇಶ್ಯೆ ಅಥವಾ ಪರಸ್ತ್ರೀಯರಲ್ಲಿ ಆಸಕ್ತನಾದ ನಾಯಿಕೆಯ ಅಣ್ಣನಿಗೆ ಬಹಳ ದೊಡ್ಡ ಹಣದ ಸಹಾಯವನ್ನು ಮಾಡಿ, ಇಲ್ಲವೆ ಸುಮಧುರ ಭಾಷಣಗಳಿಂದ ಬಹಳ ದಿವಸದ ವರೆಗೆ ಸಂತೋಷಗೊಳಿಸುತ್ತಿದ್ದು, ಆ ಮೇಲೆ ನಾಯಕನು ಅವನಿಗೆ ತನ್ನ ಮನೋಬಯಕೆಯನ್ನು ತಿಳಿಸಬೇಕು. ಹೀಗೆ ಮಾಡುವ ಉದ್ದೇಶವೇನಂದರೆ, ಬಹುತರ

ವಾಗಿ ತರುಣ ಜನರು ಸಮಾನಶೀಲ, ಸುವ್ಯವಸಾಯಿ ಹಾಗೂ ಸಮವಯಸ್ಕರಾದ ತಮ್ಮ ಮಿತ್ರರಿಗಾಗಿ ತಮ್ಮ ಜೀವವನ್ನಾದರೂ ಕೊಡಲು ಸಿದ್ಧರಿರುತ್ತಾರೆ. ಆಗ ಮೇಲೆ ಹೇಳಿದಂತೆ ಚಿರಪರಿಚಿತನಾದ ನಾಯಿಕೆಯ ಬಂಧುವಿನ ಮುಖಾಂತರವಾಗಿ ನಾಯಿಕೆಯನ್ನು ಬೇರೆ ಕಾರಣದ ಸಲುವಾಗಿ ಸಹಜವಾಗಿ ಹೋಗಲು ಬರಬಹುದಾದಂಥ ಸ್ಥಳದಲ್ಲಿ ತರಿಸಿ ಈ ಹಿಂದೆ ಹೇಳಿದ ಉಪಾಯಗಳಿಂದ ಅವಳೊಂದಿಗೆ ವಿವಾಹವಾಗಬೇಕು.

ನಾಯಿಕೆಯು ನಿದ್ರೆಹೋದಾಗ ಅಥವಾ ಮಾದಕ ಪದಾರ್ಥಗಳನ್ನು ಸೇವಿಸಿ ಉನ್ಮತ್ತಳಾದಾಗ ಅವಳ ಕೂಡ ಮಾಡುವ ಸಮಾಗಮವು ಪೈಶಾಚ ವಿವಾಹದಲ್ಲಿ ಸಮಾವೇಶವಾಗುತ್ತದೆ. ಈ ಪೈಶಾಚ ವಿವಾಹದ ವರ್ಣನೆಯನ್ನೇ ಇನ್ನು ಮುಂದೆ ಸೂತ್ರಕಾರರು ಮಾಡುತ್ತಾರೆ.

ಅಷ್ಟಮಿ ತಿಥಿಯ ಬೆಳದಿಂಗಳಲ್ಲಿ ನಾಯಕನಿಗೆ ಅನುಕೂಲಳಾದ ನಾಯಿಕೆಯ ದೂತಿಯು, ನಾಯಿಕೆಗೆ ಮಧ್ಯದಂಥ ಮಾದಕ ದ್ರವ್ಯಗಳನ್ನು ಕುಡಿಸಿ, ನಾಯಕನು ಸಹಜವಾಗಿ ಪ್ರವೇಶಿಸಲು ಅನುಕೂಲವಾಗಬಹುದಾದಂಥ ಸ್ಥಳದಲ್ಲಿ ಯಾವುದಾದರೊಂದು ನೆವದಿಂದ, ಉನ್ಮತ್ತಳಾದ ನಾಯಿಕೆಯನ್ನು ಕರೆದುಕೊಂಡು ಬರಬೇಕು.

**ತತ್ರೈನಾಂ ಮದಾತ್ಸಂಜ್ಞಾಮಪ್ರತಿ ಮಧ್ಯಮಾನಾಂ ದೂಷಯಿತ್ವೇತಿ ಸಮಾನಂ ಪೂರ್ವೇಣ ॥**

ಆ ಸ್ಥಳದಲ್ಲಿ ದೊರೆತ ನಾಯಿಕೆಯ ಮಧ್ಯಪಾನದ ಅಮಲು ಕಡಿಮೆಯಾಗುವ ಪೂರ್ವದಲ್ಲಿಯೇ ಅವಳ ಜೊತೆಗೆ ಸಮಾಗಮಮಾಡಿ, ಬಳಿಕ ಈ ಸುದ್ದಿಯನ್ನು ಅವಳ ಬಂಧುವರ್ಗದವರಿಗೆ ತಿಳಿಸಬೇಕು. ಇದರಿಂದ ಅವಳ ಬಂಧುಗಳು ತಮ್ಮ ಹುಡುಗೆಯನ್ನು ಇಂಥವನು • ಭ್ರಷ್ಟಗೊಳಿಸನೆಂಬ ಸುದ್ದಿಯು ಎಲ್ಲಿಡೆಯಲ್ಲಿ ಹಬ್ಬಿ ತಮ್ಮ ಕುಲಕ್ಕೆ ಕಲಂಕ ಹತ್ತುವುದೆಂದು ತಿಳಿದು, ಪ್ರಸ್ತುತ ನಾಯಕನಿಗೇ ಅವಳನ್ನು ಕೊಟ್ಟು ವಿವಾಹ ಮಾಡುವರು. ರಾಕ್ಷಸ ವಿವಾಹದಲ್ಲಿಯ ಇದೊಂದು ಪ್ರಕಾರ.

ಪರಸ್ಥಳಕ್ಕೆ ಅಥವಾ ದೂರದ ಹೂದೋಟಕ್ಕೆ ನಾಯಿಕೆಯು ಹೋಗುತ್ತಿದ್ದಾಳೆಂಬುವನ್ನು ತಿಳಿದು, ಅವಳ ರಕ್ಷಕರು ನಾಯಿಕೆಯನ್ನು ಬಿಟ್ಟು ಓಡಹೋಗುವಂತೆ ಅಂಜಿಸಿ, ಪ್ರಸಂಗಬಿದ್ದಲ್ಲಿ ಬಹಳ ಜನರ

ಉಪಾಯದಿಂದ ಅವಳ ರಕ್ಷಕರನ್ನು ಸಂಹರಿಸಿ, ನಾಯಕನು ನಾಯಿಕೆ ಯನ್ನು ಅಪಹರಿಸಿಕೊಂಡೊಯ್ದು, ಅವಳ ಜೊತೆಗೆ ವಿವಾಹ ಮಾಡಿ ಕೊಂಡರೆ ಅದಕ್ಕೆ ರಾಕ್ಷಸ ವಿವಾಹವೆಂದು ಪೂರ್ವಾಚಾರರು ಹೇಳುತ್ತಾರೆ.

ವಿವಾಹದಲ್ಲಿಯ ಎಂಟು ಪ್ರಕಾರಗಳಲ್ಲಿ ಯಾವ ಅಪೇಕ್ಷೆಯಿಂದ ಯಾವುದು ಶ್ರೇಷ್ಠವೆನ್ನುವುದರ ವಿವರವನ್ನು ಸೂತ್ರಕಾರರು ಇನ್ನು ಮುಂದೆ ಹಾಡುವರು.

ಧಾರ್ಮಿಕದೃಷ್ಟಿಯಿಂದ ವಿವಾಹಮಾಡಿದರೆ, ವಿವಾಹದ ಎಂಟು ಪ್ರಕಾರಗಳಲ್ಲಿ ಮೊದಲಿನ ಪ್ರಕಾರವು ಶ್ರೇಷ್ಠವಾದುದು. ಯಾಕೆಂದರೆ ಅದು ಧರ್ಮಕ್ಕನುಸರಿಸಿ ಇರುತ್ತದೆ. ಈ ವಿವಾಹ ಶಾಸ್ತ್ರದಲ್ಲಿ ಗಾಂಧರ್ವ ವಿವಾಹಕ್ಕಿಂತ ಬ್ರಹ್ಮವಿವಾಹವು ಶ್ರೇಷ್ಠವಾದುದು. ಅದಕ್ಕಾಗಿಯೇ ಮೊದಲಿನ ಪ್ರಕಾರವು ಶ್ರೇಷ್ಠವೆಂದು ಹೇಳಲಾಗಿದೆ. ಅಸುರ ವಿವಾಹಕ್ಕಿಂತ ಗಾಂಧರ್ವವಿವಾಹವು ಶ್ರೇಷ್ಠವಾದುದು. ಮೊದಲಿನ ಪ್ರಕಾರವು ಸಾಧ್ಯ ವಾಗದಿದ್ದರೆ ಎರಡನೆಯ ಪ್ರಕಾರದ ಅವಲಂಬನ ಮಾಡಬೇಕು.

ವ್ಯೂಢಾನಾಂ ಹಿ ವಿವಾಹಾನಾಮನುರಾಗಃ ಫಲಂ ಯತಃ ।
ಮಧ್ಯಮೋಽಪಿ ಹಿ ಸದ್ಯೋಗೋ ಗಾಂಧರ್ವಸ್ತೇನ ಪೂಜಿತ ॥
ಸುಖತ್ವಾದಬಹುಕ್ಲೇಶಾದಪಿ ಚಾವರಣಾದಿಹ ।
ಅನುರಾಗಾತ್ಮಕತ್ವಚ್ಚ ಗಾಂಧರ್ವಃ ಪ್ರವರೋ ಮತಃ ॥

ವಿವಾಹವೆಂದರೆ ದಂಪತಿಗಳಿಗೆ ಪ್ರೇಮದಿಂದ ಕೂಡಿಸಲ್ಪಡುವ ಒಂದು ಸಾಧನ. ವಿವಾಹದಲ್ಲಿ ಧರ್ಮಕ್ಕಿಂತಲೂ ಪ್ರೇಮವೇ ಮುಖ್ಯ. ಗಾಂಧರ್ವವಿವಾಹವು ಮಧ್ಯಮವಿದ್ದರೂ ಕಾಮಶಾಸ್ತ್ರದಲ್ಲಿ ಶ್ರೇಷ್ಠ ವಾದ್ದುದು. ಗಾಂಧರ್ವವಿವಾಹವು ಪತಿ ಪತ್ನಿಯರಿಬ್ಬರಿಗೂ ಸುಖದಾಯಕ ಅಲ್ಪಕ್ಲೇಶಯುಕ್ತ ಮತ್ತು ಪ್ರೇಮಮಯವಿರುವುದರಿಂದ, ಅಲ್ಲದೆ ಅದರಲ್ಲಿ ವಿಧಿಯ ವಿಶೇಷ ತೊಂದರೆಯಿರದ ಮೂಲಕ ಎಲ್ಲ ವಿವಾಹಗಳಿಗಿಂತಲೂ ಇದು ಉತ್ತಮವಾದುದೆಂದು ಹೇಳಲಾಗಿದೆ.

ಇದರಂತೆ ಶ್ರೀ ವಾತ್ಸ್ಯಾಯನ ಕಾಮಾಸೂತ್ರದಲ್ಲಿಯ ಕನ್ಯಾಸಾಂಪ್ರ ಯುಕ್ತವೆಂಬ ಮೂರನೆಯ ಅಧಿಕರಣ ಸಮಾಪ್ತ

# ಅಧಿಕರಣ : ೪

## ಅಧ್ಯಾಯ : ೧

## ಏಕಚಾರಿಣೀವೃತ್ತನಾಯಕ ಪ್ರಕರಣ

ಹಿಂದಿನ ಅಧಿಕರಣದಲ್ಲಿ ಹೇಳಿದಂತೆ ಕುಮಾರಿ ಕನ್ಯೆಯು ಪುರುಷನ ಜೊತೆಗೆ ಸಂಬಂಧವುಂಟಾದರೆ, ಆಗ ಅವಳು ಭಾರ್ಯಾ ಅಥವಾ ಅರ್ಧಾಂಗಿಯಾಗುವಳು. ಇಂತಹ ಅರ್ಧಾಂಗಿಯು ತನ್ನ ಪತಿಯ ಸಂಗಡ ಹೇಗೆ ಆಚರಣೆಯನ್ನಿಡಬೇಕು ಎಂಬುದನ್ನು ತಿಳಿಸುವುದಕ್ಕಾಗಿಯೇ ಈ ಭಾರ್ಯಾಧಿಕಾರಿಕವೆಂಬ ಅಧಿಕರಣವನ್ನು ಈಗ ಸೂತ್ರಕಾರರು ಪ್ರಾರಂಭಿಸುತ್ತಾರೆ. ಈ ಭಾರ್ಯಾಧಿಕಾರಿಕವೆಂಬ ಅಧಿಕರಣವು ಹೊಸದಾಗಿರದೆ ಕನ್ಯಾಸಂಪ್ರಯುಕ್ತವೆಂಬ ಹಿಂದಿನ ಅಧಿಕರಣದ ಅಂಗಭೂತವಾದದ್ದಿ ಇದೆ. ಹೀಗೆ ತಿಳಿಯದೆ ಇದು ಸ್ವತಂತ್ರವೆಂದು ಎಣಿಸಿದರೆ, ನಾಯಕನ ಜತೆಗೆ ಸಂಬಂಧವುಂಟಾದ ನಾಯಿಕೆಯು ಹೇಗೆ ಆಚರಿಸಬೇಕೆಂಬುದರ ನಿಯಮವೇ ತಿಳಿಯಲಿಕ್ಕಿಲ್ಲ ಆಕೆಗೆ. ಅಲ್ಲದೆ ಇದರಿಂದ ಅವಳಿಗೆ 'ಅರ್ಧಾಂಗಿ' ಎಂದು ಕರೆಯಿಸಿಕೊಳ್ಳಬಹುದಾದ ಯಾವದೇ ಯೋಗ್ಯವಾದ ಕಾರಣವೂ ಕೂಡ ಲಭಿಸಲಿಕ್ಕಿಲ್ಲ; ಮತ್ತು ಅವಳಿಗೆ ನಾಯಕನ ಜತೆಗಿನಾದರೂ ಕೂಡ ಆಗದಂತೆಯೇ ಆದೀತು. ಹೀಗಾಗದೆ ವೈವಾಹಿಕ ಸಂಬಂಧವು ಹೆಚ್ಚು ದೃಢವಾಗಬೇಕೆಂದು ಪತ್ನಿಯ ಕರ್ತವ್ಯದ ಬಗ್ಗೆ ಇಲ್ಲಿ ಹೇಳಲಾಗುತ್ತದೆ. ಏಕಚಾರಿಣಿ (ಏಕಪತ್ನಿ), ಹಾಗೂ ಸಪತ್ನಿಕಾ (ಸವತಿಯುಳ್ಳವಳು) ಎಂದು ಪತ್ನಿಯರಲ್ಲಿ ಎರಡು ಪ್ರಕಾರಗಳು. ಈ ಎರಡೂ ಪ್ರಕಾರಗಳಲ್ಲಿ ಏಕಪತ್ನಿಯು ಮಹತ್ವದವಳಿರುವುದರಿಂದ ಅವಳ ವಿಷಯದ ವರ್ಣನೆಯನ್ನೇ ಮೊದಲಿಗೆ ಮಾಡಲಾಗುತ್ತದೆ.

**ಭಾರ್ಯೈಕಚಾರಿಣೀ ಗೂಢವಿಶ್ರಂಭಾ ದೇವವತ್ಪತಿಮಾನುಕೂಲ್ಯೇನ ವರ್ತೇತ ॥**

ಅತ್ಯಂತ ವಿಶ್ವಾಸವುಳ್ಳ ಏಕಚಾರಿಣಿ ಭಾರ್ಯೆಯು ಪತಿಯೇ ದೇವರೆಂದು ತಿಳಿದು, ಅವನ ಜೊತೆಗೆ ಅನುಕೂಲಳಾಗಿ ವರ್ತಿಸಬೇಕು. "ಭರ್ತಾ ತು ದೇವತಾ ಸ್ತ್ರೀಣಾಂ" ಈ ವಚನಕ್ಕೆ ಅನುಸರಿಸಿ ದೇವರಂದೇ ತಿಳಿಯಬೇಕು. ಒಂದು ವೇಳೆ ಪತಿಯು ಸಮ್ಮತಿಯನ್ನು ಕೊಟ್ಟರೆ ಮನೆಗೆ ಹತ್ತುವ ಪದಾರ್ಥಗಳ ಎಲ್ಲ ವ್ಯವಸ್ಥೆಯನ್ನು ತಾನೇ ವಹಿಸಬೇಕು. ಶರೀರಸ್ಥಿತಿ ವಿಷಯದಲ್ಲಿ ಅಥವಾ ಬಾಹ್ಯವಸ್ತುಸ್ಥಿತಿ ವಿಷಯಲ್ಲಿ ಎಂದು ಹೀಗೆ ಎರಡೂ ಪ್ರಕಾರಗಳ ಆಚರಣೆಯನ್ನು ಮುಂದೆ ಹೇಳುವಂತೆ ಮಾಡಬೇಕು.

ಮನೆಯ ಎಲ್ಲ ವ್ಯವಸ್ಥೆಯನ್ನು ನೋಡಿಕೊಳ್ಳುವುದೆಂದವೇಲೆ ಮನೆಯು ಹೇಗೆ ಇರಬೇಕೆಂಬುದನ್ನು ಮುಂದಿನಂತೆ ಸೂತ್ರಕಾರರು ಹೇಳುತ್ತಾರೆ.

ಮನೆಯು ನಿರ್ಮಲವಾಗಿ ನಾರಿಸಿದಿರಬೇಕು. ಅಲ್ಲಿಯ ನೆಲವು ಮೆತ್ತಗೆ ಹೂವುಳ್ಳದ್ದಾಗಿರಬೇಕಲ್ಲದೆ ಎಲ್ಲ ಕಡೆಗೂ ಬೇರೆ ಬೇರೆ ಹೂಗಳಿಂದ ಸುಶೋಭಿತವಾಗಿರಬೇಕು. ಅಂದರೆ, ಅತ್ತ ದೃಷ್ಟಿಯನ್ನು ಚಲ್ಲಿದ ಕೂಡಲೇ ಆಕರ್ಷಿಸಲ್ಪಡುತ್ತದೆ. ಅದರಂತೆಯೇ ಆ ಮನೆಯಲ್ಲಿ ತ್ರಿಕಾಲವೂ ಪೂಜಾಕರ್ಮವನ್ನು ಮಾಡಿಸಿಕೊಳ್ಳಬೇಕಲ್ಲದೆ, ಅದರಲ್ಲಿಯ ದೇವರ ಮನೆಯು ಪ್ರತಿನಿತ್ಯವೂ ಪೂಜೆಮಾಡಿದ್ದಿರಬೇಕು.

**ನಹ್ಯತೋಽನ್ಯದ್ ಗೃಹಸ್ಥಾನಾಂ ಚಿತ್ತಗ್ರಾಹಕಮಸ್ತೀತಿ ಗೋನರ್ದೀಯಃ ॥**

ಇಂತಹ ಮನೆಯನ್ನು ಬಿಟ್ಟು ಉಳಿದ ಯಾವದೇ ಮನೆಯು ಗೃಹಸ್ಥನ ಚಿತ್ತವನ್ನು ಆಕರ್ಷಿಸುವುದಿಲ್ಲವೆಂದು ಗೋನರ್ದೀಯನ ಮತವಿದೆ. ಗುರುಜನರು, ಯುಕ್ತಿಯಿಂದ ವಶಪಡಿಸಿಕೊಂಡ ಸೇವಕರು, ಅತ್ತಿಗೆ-ನಾದಿನಿಯರು ಮತ್ತು ಅವರ ಪತಿಯರು ಇವರೆಲ್ಲರಿಗೆ ಅವರವರ ಯೋಗ್ಯತೆಯ ಮೇರೆಗೆ ಸತ್ಕರಿಸಬೇಕು. ಮನೆಯ ಹತ್ತಿರದಲ್ಲಿಯ ಭೂಮಿಯನ್ನು ಚೆನ್ನಾಗಿ ಹದಗೊಳಿಸಿ, ಕೊತಂಬರಿ, ಅರಿಷಿಣ, ಅಲ್ಲ ಹಾಗೂ ಇತರ ತೊಪ್ಪಲ ಪಲ್ಯಗಳ ಮಡಿಗಳನ್ನು ಸೇವಕ ಜನರಿಂದ ಮಾಡಿಸಬೇಕು.

ಜೀರಿಗೆ ಮೊದಲಾದ ಮಸಾಲೆಯ ಸಾಮಾನುಗಳ ಬೆಳೆಗೆಯನ್ನು ಮಾಡಬೇಕು.

ಮನೆಯ ಮುಂದಿನ ಕೈತೋಟದಲ್ಲಿ ಮುಳ್ಳು, ಸೇವಂತಿಗೆ, ಮಲ್ಲಿಗೆ, ಕೆಂಪು-ಹಳದಿ-ಬಿಳಿ ಗುಲಾಬಿ, ನೆಲ್ಲಿಕಾಯಿಗಿಡಗಳನ್ನು ನೆಟ್ಟಬೇಕಲ್ಲದೆ, ಇತರ ಹೂವಿನ ಗಿಡಗಳನ್ನೂ ಹಚ್ಚಬೇಕು. ಅವುಗಳ ಮಧ್ಯದಲ್ಲಿ ಬೇಸಿಗೆಯ ಬಿಸಿಲಲ್ಲಿ ಕೂಡ್ರಲು ಅನುಕೂಲವಾಗುವಂತೆ ಒಂದು ಲತಾಮಂಟಪವನ್ನೂ ಕಟ್ಟಿಸಬೇಕು. ಮನೆಯ ಸಮೀಪದಲ್ಲಿಯೇ ಒಂದು ಬಾವಿಯನ್ನು ಕಟ್ಟಿಸಬೇಕು.

ಬಿಕ್ಷುಕಿ, ಬೌದ್ಧ ಸನ್ಯಾಸಿನಿ, ರಕ್ತ ವಸ್ತ್ರಧಾರಣಮಾಡುವ ಜೈನ ಸನ್ಯಾಸಿನಿ, ಶೀಲಭ್ರಷ್ಟಳಾದ ಕುಟಿಲೆ, ಇಂದ್ರಜಾಲ ಮೊದಲಾದ ಪ್ರಯೋಗಗಳನ್ನು ಮಾಡಿತೋರಿಸುವವಳು, ಜೋತಿಷ್ಯವನ್ನು ಹೇಳುವವಳು ಮತ್ತು ಮಾಟ ಮಂತ್ರ ಮಾಡುವವಳು ಮೊದಲಾದ ಸ್ತ್ರೀಯರ ಸಂಗಡ ಕೂಲಿನ ಸ್ತ್ರೀಯರು ಸಂಸರ್ಗವನ್ನು ಮಾಡಬಾರದು.

ಊಟದಲ್ಲಿ ಗಂಡನಿಗೆ ಯಾವ ಪದಾರ್ಥವು ಸೇರುತ್ತದೆ; ಯಾವ ಪದಾರ್ಥವು ಸೇರುವುದಿಲ್ಲ; ಯಾವ ಪದಾರ್ಥವು ಅಪಥ್ಯವಾದುದಿದೆ ಮೊದಲಾದ ಸಂಗತಿಗಳನ್ನು ಸ್ತ್ರೀಯು ತಿಳಿದುಕೊಳ್ಳಬೇಕು. ಅಂದರೆ ಯಾವ ಪದಾರ್ಥವನ್ನು ಸಂಗ್ರಹಿಸಬೇಕು ಹಾಗೂ ಯಾವ ಪದಾರ್ಥವನ್ನು ಸಂಗ್ರಹಿಸಬಾರದು ಎಂಬುದು ತಿಳಿಯುತ್ತದೆ. ಹೊರಗಿನಿಂದ ಮನೆಯ ಕಡೆಗೆ ಬರುತ್ತಿರುವ ಪತಿಯ ಸ್ವರವನ್ನು, ಪತಿಯು ಇನ್ನೂ ಹೊರಗಿರುವಾಗಲೇ ಆಲಿಸಿ, ಯಾವದಾದರೂ ಕೆಲಸಮಾಡುವ ನಿಮಿತ್ಯದಿಂದ ಸ್ತ್ರೀಯು ಒಳಂಗಳಲ್ಲಿಯೇ ನಿಂತಿರಬೇಕು. ಪತಿಯ ಪಾದ ತೊಳೆಯಲು ನೀರು ತಂದಂಥ ಪರಿಚಾರಿಕೆಯನ್ನು ಬಿಡಿಸಿ ತಾನೇ ಸ್ವತಃ ಪತಿಯ ಪಾದವನ್ನು ತೊಳೆಯಬೇಕು.

ನಾಯಿಕೆಯು ಮೈಮೇಲಿನ ಆಭರಣ-ವಸ್ತ್ರಭೂಷಣಗಳನ್ನು ತೆಗೆದು ಏಕಾಂತದಲ್ಲಿ ನಾಯಕನ ಎದುರಿಗೆ ಎಂದೂ ನಿಲ್ಲಬಾರದು. ಅದರಿಂದ ಕೆಲಕೆಲವು ಸಲ ಆವನ ಪ್ರೇಮ ವಿರಸವಾಗುವ ಸಂಭವವೂ ಉಂಟು.

ನಾಯಕನು ದುರ್ವ್ಯಯ ಮಾಡುತ್ತಿದ್ದರೆ, ನಾಯಿಕೆಯು ಏಕಾಂತದಲ್ಲಿ ಅವನಿಗೆ ತಿಳಿಹೇಳಬೇಕು.

ಲಗ್ನ ಸಮಯದಲ್ಲಿ ವಧೂವರರ ಮನೆಗೆ, ಯಜ್ಞಕ್ಕೆ, ಸಖಿಯ ಭೆಟ್ಟಿಗೆ, ವನಭೋಜನಕ್ಕೆ ಮತ್ತು ದೇವದರ್ಶನಕ್ಕೆ ನಾಯಿಕೆಯು ಪತಿಯ ಸಮ್ಮತಿಯನ್ನು ಪಡೆದು ಹೋಗಬೇಕು. ಪತಿಯ ಸಮ್ಮತಿಯನ್ನು ಪಡೆದುಕೊಳ್ಳದೆ ಹೊರಗೆ ಹೋಗುವ ನಾಯಿಕೆಯ ಬಗ್ಗೆ ಸ್ವಲ್ಪ ದಿನಗಳಲ್ಲಿಯೇ ಜನರು ಸಂಶಯ ಪಡಬಹುದು. ಎಲ್ಲ ತರಹದ ಆಟಪಾಟಗಳಲ್ಲಿ, ಉತ್ಸವಗಳಲ್ಲಿ ಭಾಗವಹಿಸುವ ಪೂರ್ವದಲ್ಲಿ ಪತಿಯ ಸಮ್ಮತಿಯನ್ನು ಪಡೆದೇ ಅದರಲ್ಲಿ ಭಾಗವಹಿಸಬೇಕು.

ಪತಿಯು ಮಲಗಿದ ನಂತರವೇ ಪತ್ನಿಯು ಮಲಗಿಕೊಳ್ಳಬೇಕು; ಪತಿಯು ಏಳುವುದಕ್ಕಿಂತ ಪೂರ್ವದಲ್ಲಿಯೇ ತಾನು ಏಳಬೇಕು. ನಿದ್ರೆಯಲ್ಲಿರುವ ಪತಿಯನ್ನು ಎಬ್ಬಿಸಿ ಅವನ ನಿದ್ರಾಭಂಗಗೊಳಿಸಬಾರದು. ಸ್ವಯಂಪಾಕಗ್ರಹವು ಸ್ವಚ್ಛವೂ ಪವಿತ್ರವೂ ಇರಬೇಕು. ಪತಿಯ ಕಡೆಯಿಂದ ಏನಾದರೂ ಅಪರಾಧವಾದರೆ, ಅವನ ಮೇಲೆ ತುಸು ಸಿಟ್ಟಾಗಬೇಕು; ಆದರೆ ಅವನನ್ನು ಬಹಳ ಬೈಯ್ದು ಛೀಮಾರಿ ಮಾತನಾಡಬಾರದು.

> ಸಾಧಿಕ್ಷೇಪವಚನಂ ತ್ವೇನಂ ಮಿತ್ರಜನಮಧ್ಯಸ್ಥಮೇಕಾಕಿನಂ ವಾಪ್ಯುಪಾಲ-
> ಭೇತ ನ ಚ ಮೂಲಕಾರಿಕಾ ಸ್ಯಾತ್ ॥ ನ ಹ್ಯತೋಽನ್ಯದಪ್ರತ್ಯಯ
> ಕಾರಣಮಸ್ತೀತಿ ಗೋನರ್ದೀಯಃ ॥

ಕಾರ್ಯನಿಮಿತ್ತವಾಗಿ ಪತಿಯು ಮಿತ್ರರ ಜೊತೆಗೆ ಮಾತನಾಡುತ್ತ ಕುಳಿತಾಗ ಇಲ್ಲವೆ ಒಬ್ಬನೇ ಕೂತಾಗ ನಾಯಿಕೆಯು ಅವನ ಅಪರಾಧಗಳನ್ನು ಸ್ಪಷ್ಟೀಕರಿಸಿ, ಅವನನ್ನು ದೂಷಿಸಬೇಕು. ಮಂತ್ರ ಔಷಧ ಮೊದಲಾದವುಗಳ ಮೂಲಕ ಪತಿವಶೀಕರಣದ ಪ್ರಯೋಗ ಮಾಡಬಾರದು. ಯಾಕಂದರೆ ತನ್ನ ಪತ್ನಿಯು ತನ್ನ ಮೇಲೆ ವಶೀಕರಣದ ಪ್ರಯೋಗವನ್ನು ಮಾಡುತ್ತಿರುವಳೆಂದು ಪತಿಗೆ ತಿಳಿದರೆ, ಅವಳ ಮೇಲೆ ಸ್ವಲ್ಪವೂ ವಿಶ್ವಾಸ ಇಡಲಿಕ್ಕಿಲ್ಲ. ವಶೀಕರಣದಂಥ ಅವಿಶ್ವಾಸ ಹುಟ್ಟಿಸುವ ಬೇರೆ ಯಾವ ಕಾರಣವೂ ಇಲ್ಲವೆಂದು ಗೋನರ್ಧೀಯನ ಮತವಿದೆ. ಮತ್ತು ಅದು ಪ್ರಸ್ತುತ ಸೂತ್ರಕಾರರಿಗೆ ಒಪ್ಪಿಗೆಯೂ ಇದೆ.

ಅಪಶಬ್ದಗಳನ್ನುಚ್ಚರಿಸುವುದು, ಪ್ರೇಮಶೂನ್ಯವಾಗಿ ನೋಡುವುದು, ಒಂದೇ ಕಡೆಗೆ ಮುಖ ತಿರುವಿ ಮಾತನಾಡುವುದು, ಸದಾಕಾಲವೂ ಬಾಗಿಲಲ್ಲಿ ನಿಲ್ಲುವುದು, ಬಾಗಿಲಲ್ಲಿ ನಿಂತು ಹೊರಗೆ ನೋಡುತ್ತಿರುವುದು, ಮನೆಯ ಹತ್ತಿರದ ತೋಟದಲ್ಲಿ ಹೋಗಿ ಯಾರ ಜೊತೆಗಾದರೂ ಮಾತನಾಡುವುದು ಮತ್ತು ಏಕಾಂತಸ್ಥಳದಲ್ಲಿ ಬಹಳ ಹೊತ್ತಿನವರೆಗೆ ಕಾಲಕಳೆಯುವುದು ಮೊದಲಾದ ಸಂಗತಿಗಳನ್ನು ನಾಯಿಕೆಯು ಬಿಟ್ಟುಬಿಡಬೇಕು. ಯಾವಾಗಲೂ ಬೆವರಿನಿಂದ ಸುರಿಯುತ್ತಿರುವುದು, ಹಲ್ಲುಗಳು ಹೊಲಸಾಗಿರುವುದು, ಮೈಯಿಂದ ದುರ್ಗಂಧವಾಸನೆ ಹೊರಡುವುದು ಇವುಗಳಿಂದ ನಾಯಿಕೆಯು ಪತಿಯ ಅಪ್ರೀತಿಗೆ ಕಾರಣಳಾಗಬಹುದು. ಅದಕ್ಕಾಗಿ ನಾಯಿಕೆಯು ಯಾವಾಗಲೂ ಸ್ವಚ್ಛವಾಗಿರಲು ಪ್ರಯತ್ನಮಾಡುತ್ತಿರಬೇಕು.

ಗಂಡನ ಹತ್ತಿರ ಹೋಗುವಾಗ ನಾಯಿಕೆಯು ಮೈಮೇಲೆ ಹೆಚ್ಚಾಗಿ ಅಲಂಕಾರಗಳನ್ನು ಹಾಕಿಕೊಳ್ಳಬೇಕು. ಅನೇಕ ಪ್ರಕಾರದ ಸುಗಂಧಿ ಹೂವುಗಳನ್ನು ಮುಡಿಯಲ್ಲಿ ಮುಡಿಯಬೇಕು. ಮೈಗೆ ಸುಗಂಧೀ ದ್ರವ್ಯಗಳನ್ನು ಹಚ್ಚಿಕೊಳ್ಳಬೇಕು; ಮತ್ತು ಕಾಲಪರಿಸ್ಥಿತಿಗನುಸರಿಸಿ ಬೇರೆ ಬೇರೆ ಬಣ್ಣದ ವಸ್ತ್ರಗಳನ್ನು ಧರಿಸಬೇಕು. ಇದರಿಂದ ನಾಯಿಕೆಯು ಅತ್ಯಂತ ಸುಂದರಿಯಾಗಿ ಕಂಡು ನಾಯಕನ ವಿಶೇಷ ಪ್ರೇಮಕ್ಕೆ ಪಾತ್ರಳಾಗುವಳು.

ಯಾತ್ರಾ ಮತ್ತು ಕ್ರೀಡಾ ಪ್ರಸಂಗಗಳಲ್ಲಿ ನಾಯಿಕೆಯು ಅತಿಶಯ ಸೂಕ್ಷ್ಮವಾದ, ತಿಳುವಾದ ವಸ್ತ್ರಗಳನ್ನು ಧರಿಸಬೇಕು. ಅಂದರೆ ಅವುಗಳನ್ನು ಸಾವರಿಸಿಕೊಳ್ಳಲು ಅನುಕೂಲವಾಗುವುದು. ಮೈಮೇಲೆ ಕೆಲವೇ ಆಭರಣಗಳಿರಬೇಕು. ಅವಾದರೂ ಹೆಚ್ಚು ಹೊಳಪುಳ್ಳವುಗಳಿರದೆ ಸೌಮ್ಯವಾದವುಗಳಿರಬೇಕು. ಮೈಗೆ ಸೌಮ್ಯವಾಸನೆ ಬರುವ ಸುಗಂಧಿ ದ್ರವ್ಯಗಳನ್ನು ಹಚ್ಚಬೇಕು. ಅದರಂತೆಯೇ ಬಿಳಿ ಹೂವುಗಳನ್ನು ಮುಡಿಯಬೇಕು. ಇದಕ್ಕೆ ವಿವಾಹಕಾಲದ ವೇಷವೆನ್ನುವರು.

ಪತಿಯ ವ್ರತೋಪವಾಸನಗಳ ಅನುಕರಣವನ್ನು ಪತ್ನಿಯು ಮಾಡಬೇಕು. ಪತಿಯು ಬೇಡವೆಂದು ಹೇಳಿದರೂ ನೀವು ಈ ಕೆಲಸದಲ್ಲಿ ನನಗೆ ಪ್ರತಿಬಂಧ ಮಾಡಬೇಡಿರೆಂದು ತಿಳಿಹೇಳಿ ಅವನ ಒಪ್ಪಿಗೆಯನ್ನು ಪಡೆಯಬೇಕು. ಯಾವುದೇ ವಸ್ತುವು ಅವಶ್ಯಕತೆಯ ಸಮಯದಲ್ಲಿ ಕೂಡಲೆ ಕೈಗೆ ಸಿಗುವಂತೆ ವ್ಯವಸ್ಥೆಯಿಂದ ಇಡಬೇಕು. ಮತ್ತು ಅವುಗಳನ್ನು

ಕಾಲಕಾಲಕ್ಕೆ ಸಂಗ್ರಹಿಸಿಡಬೇಕು. ಅದರಂತೆಯೇ ಸೈಂಧವ ಮೊದಲಾದ ಕ್ಷಾರ ಪದಾರ್ಥ; ತುಪ್ಪ, ಎಣ್ಣೆ ಮೊದಲಾದ ಸ್ನಿಗ್ಧ ಪದಾರ್ಥ, ಪಂಚಮೂಲ ಮೊದಲಾದ ಔಷಧಿ ಪದಾರ್ಥಗಳನ್ನು ಸಂಗ್ರಹಿಸಿ ಕಾಳಜೀಪೂರ್ವಕವಾಗಿ ಬೇರೆ.ಬೇರೆ ಋತುಗಳಲ್ಲಿ ಅವು ಕೆಡದಂತೆ ಕಾಯ್ದಿಡಬೇಕು. ಮೂಲಂಗಿ ಮೊದಲು ಮಾಡಿಕೊಂಡು ಎಲ್ಲ ಔಷಧ-ವನಸ್ಪತಿಗಳ ಬೀಜಗಳನ್ನು ಸಂಗ್ರಹಿಸಿ ಯೋಗ್ಯಕಾಲದಲ್ಲಿ ಅವುಗಳನ್ನು ನಡಬೇಕು.

"ಧನಾಯುಷೀ ಗುಪ್ತತಮೆ ಕಾರ್ಯೆ" ಎಂಬ ಸ್ಮೃತಿವಚನದಂತೆ ಮನೆಯಲ್ಲಿ ದ್ರವ್ಯವು ಎಷ್ಟಿದೆಯೆಂಬುದನ್ನು ಬೇರೆಯವರಿಗೆ ತಿಳಿಸಬಾರದು. ಅದರಂತೆ ಪತಿಯು ಯಾವುದಾದರೊಂದು ರಹಸ್ಯ ಸಂಗತಿಯನ್ನು ಹೇಳಿದರೆ ಅದನ್ನು ಎರಡನೆಯವರ ಮುಂದೆ ಎಂದೂ ಹೇಳಬಾರದು. ಪತ್ನಿಯೇ ತನ್ನ ರಹಸ್ಯವನ್ನು ಹೊರಗೆಡಹಿದಳೆಂದು ಪತಿಗೆ ತಿಳಿದರೆ ಅವಳು ಪತಿಯ ನಿಂದೆಗೆ ಕಾರಣಳಾಗುವಳು.

ಕಲಾಕೌಶಲ್ಯ, ಸೌಂದರ್ಯ, ಶೃಂಗಾರ, ಸ್ವಯಂಪಾಕ, ನೈಪುಣ್ಯ, ಮಾನಮರ್ಯಾದೆ ಮತ್ತು ಪತಿಸೇವೆಗಳಲ್ಲಿ ಉಳಿದ ಸ್ತ್ರೀಯರಿಗಿಂತಲೂ ತಾನು ಶ್ರೇಷ್ಠಳೆಂಬುದನ್ನು ತೋರಿಸಬೇಕು. ವಾರ್ಷಿಕ ಉತ್ಪನ್ನವು ಎಷ್ಟಿದೆಯೆಂಬುದನ್ನು ಲೆಕ್ಕಹಾಕಿ ಅದರಂತೆ ಮನೆಯ ಖರ್ಚನ್ನಿಡಬೇಕು. ಅಂದರೆ ಪತಿಯು ಮನೆಯ ಖರ್ಚಿಗಾಗಿ ಎರಡನೆಯ ಕಡೆಗೆ ಸಾಲ ಮಾಡುವ ಪ್ರಸಂಗಬೀಳುವುದಿಲ್ಲ.

ಪ್ರತಿ ದಿವಸ ಮನೆಯಲ್ಲಿ ಊಟವಾದ ನಂತರ ಗ್ರಹಣಿಯು ಶಿಲ್ಕು ಉಳಿದ ಹಾಲಿನ ಬೆಣ್ಣೆಯನ್ನು ತಯಾರಿಸಬೇಕು. ಅಲ್ಲದೆ ಎರಡನೆಯ ದಿನದ ಉಪಯೋಗಕ್ಕೆ ಮಜ್ಜಿಗೆಯೂ ದೊರೆಯುತ್ತದೆ. ಎಣ್ಣೆ ತೆಗೆಯುವ ಪದಾರ್ಥಗಳಿಂದ ಎಣ್ಣೆಯನ್ನು ತೆಗೆಯಬೇಕು. ಹತ್ತಿಯ ನೂಲನ್ನು ತಯಾರಿಸಿ ಅದರಿಂದ ಹಾಸಿಕೊಳ್ಳುವ ಅರಿವೆಗಳನ್ನು ತಯಾರಿಸಬೇಕು. ಪಾತ್ರೆಗಳನ್ನು ಇಡಲು ವ್ಯವಸ್ಥೆಮಾಡಿಕೊಳ್ಳಬೇಕು. ನೀರು ಜಗ್ಗಲು ಹಗ್ಗವನ್ನು ತಯಾರಿಸಬೇಕು. ಮನೆಯಲ್ಲಿ ಸಾಕಿದ ಎಮ್ಮೆ, ಆಕಳು, ಎತ್ತುಗಳನ್ನು ಕಟ್ಟಲು ಕಣ್ಣೆಯನ್ನು ತಯಾರಿಸಬೇಕು. ಇವೆಲ್ಲವುಗಳನ್ನು ತಯಾರಿಸಲು ಬೇಕಾಗುವ ಕಚ್ಚಾ ಪದಾರ್ಥಗಳನ್ನು ಮೊದಲಿಗೆ ಸಂಗ್ರಹಿಸಿ

ರಬೇಕು. ಬೀಸುವ ಪದಾರ್ಥಗಳನ್ನು ಬೀಸಿದ್ದನ್ನೂ ಕುಟ್ಟುವ ಪದಾರ್ಥಗಳನ್ನು ಕಟ್ಟಿದ್ದನ್ನೂ ಪರೀಕ್ಷಿಸಿ ನೋಡಬೇಕು. ನಿಂಬಿಪಾನಕ ದಂಥ ಪೇಯಪದಾರ್ಥಗಳನ್ನು ತಯಾರಿಸಿ ಮನೆಯಲ್ಲಿ ಎಲ್ಲರಿಗೂ ಕೊಡ ಬೇಕು. ತೌಡು ಮೊದಲಾವುಗಳನ್ನು ಹೊರಗೆ ಚೆಲ್ಲದೆ, ಅವುಗಳ ಉಪಯೋಗ ಮಾಡಬೇಕು. ಸೇವಕ ಜನರಿಗೆ ತಿಂಗಳಿಗೆ ಕೊಡತಕ್ಕ ಸಂಬಳವನ್ನೂ ನಿತ್ಯವೂ ಕೊಡತಕ್ಕ ಊಟವನ್ನೂ ನೆನಪಿನಲ್ಲಿಡಬೇಕು. ಮನೆಯಲ್ಲಿಯ ಪಶು-ಪಕ್ಷಿಗಳ ಬಗ್ಗೆ ಕಾಳಜಿಯನ್ನು ವಹಿಸಿ ಸಮಯಕ್ಕೆ ಸರಿಯಾಗಿ ಅವುಗಳಿಗೆ ಆಹಾರವನ್ನು ಹಾಕಬೇಕು. ಕುದುರೆ ಮೊದಲಾದವು ಗಳ ವಾಸಸ್ಥಳದ ವ್ಯವಸ್ಥೆಗೊಳಿಸಬೇಕು. ಮತ್ತು ಇತರ ಆವಶ್ಯಕ ಪ್ರಶ್ನೆಗಳ ಕಡೆಗೂ ಲಕ್ಷ್ಯವನ್ನು ಕೊಡಬೇಕು. ಅಲ್ಲದೆ ದಿನದ ಜಮಾ-ಖರ್ಚಿನ ಅಭಾವೆಯನ್ನು ಗೃಹಿಣಿಯು ನಿತ್ಯವೂ ತಪ್ಪದೆ ತೆಗೆಯಬೇಕು.

> ತಜ್ಜಘನ್ಯಾನಾಂ ಚ ಜೀರ್ಣವಾಸಸಾಂ ಸಂಚಯಸ್ತೈರ್ವಿವಿಧರಾಗೈಃ ಶುದ್ಧೈರ್ವಾ ಕೃತಕರ್ಮಣಾಂ ಪರಿಚಾರಕಾಣಾಮನುಗ್ರಹೋ ಮನಾ-ರ್ಥೇಷು ಚ ದಾನಮನ್ಯತ್ರ ವೋಪಯೋಗಃ ॥

ಪತಿಯು ಉಪಯೋಗಿಸಿದ ಹಳೆಯ ಅರಿವೆಗಳನ್ನು ಸಂಗ್ರಹಿಸಬೇಕು. ಅವು ಹೆಚ್ಚು ಬೆಲೆ ಬಾಳುವುದಿರದಿದ್ದರೆ, ಸೇವಕರಿಗೆ ಬಹುಮಾನವೆಂದು ಕೊಡಬೇಕು. ಇಲ್ಲವೆ ತನ್ನ ಸನ್ಮಾನವಾಗಬೇಕೆಂದು ಇಚ್ಛಿಸುವವರಿಗೆ ಸನ್ಮಾರ್ಥವಾಗಿ ಕೊಡಬೇಕು. ಇಲ್ಲವೆ ದೀಪದ ಬತ್ತಿಯಂಥ ಇತರ ಕಾರ್ಯ ಗಳಲ್ಲಿ ಅವುಗಳನ್ನು ಉಪಯೋಗಿಸಬೇಕು. ಗುಣ, ಜಾತಿ, ವಯಮಾನಕ್ಕನು ಸರಿಸಿ ಪತಿಯ ಗೆಳೆಯರ ಸನ್ಮಾನಮಾಡಬೇಕು. ಅದರಿಂದ ಅವಳ ಬಗ್ಗೆ ಅವರಲ್ಲಿ ಸದ್ಬುದ್ಧಿಯು ಹುಟ್ಟುವುದಲ್ಲದೆ, ಅದರ ಮೂಲಕ ಪತಿಭಕ್ತಿಯೂ ವ್ಯಕ್ತವಾಗುವುದು.

ಅತ್ತೆ ಮಾವಂದಿರ ಸೇವೆ ಮಾಡಬೇಕು. ಅವರ ಆಧೀನದಲ್ಲಿರಬೇಕು. ಅವರಿಗೆ ತಿರುಗಿ ಉತ್ತರವನ್ನು ಕೊಡಬಾರದು. ಅವರ ಜೊತೆಗೆ ಸಾವ ಕಾಶವಾಗಿ ಮಿತಭಾಷಣಮಾಡಬೇಕು. ಅವರ ಸಾನ್ನಿಧ್ಯದಲ್ಲಿ ಘಟ್ಟಿಯಾಗಿ ನಗಬಾರದು. ಪತಿಗೆ ಪ್ರಿಯ ಹಾಗೂ ಅಪ್ರಿಯ ವಸ್ತುಗಳಿದ್ದರೆ, ಅವು ತನಗೂ ತದನುಗುಣವಾಗಿ ಪ್ರಿಯ ಹಾಗೂ ಅಪ್ರಿಯ ವಸ್ತುಗಳೆಂದು

ತಿಳಿಯಬೇಕು. ಎಲ್ಲತರದ ಸುಖೋಪಭೋಗ ದೊರೆಯುತ್ತಿದ್ದರೂ ಉದ್ಧಟತನವಿರಬಾರದು. ಸೇವಕ ಜನರಿಗೆ ಅವರವರಿಗೆ ಗೊತ್ತು ಮಾಡಿದ ಕೆಲಸಗಳಿಗೇ ನಿಯಮಿಸಬೇಕು. ಉತ್ಸವ ಮೊದಲಾದ ಆನಂದ ಸಮಯದಲ್ಲಿ ಅವರಿಗೆ ಬಹುಮಾನ ಕೊಟ್ಟು ಸನ್ಮಾನ ಮಾಡಬೇಕು.

ಇಲ್ಲಿಯ ವರೆಗೆ ಪತ್ನಿಯು ಪತಿಸಾನಿಧ್ಯದಲ್ಲಿದ್ದಾಗ ಹೇಗೆ ಆಚರಿಸ ಬೇಕೆಂಬುದನ್ನು ಹೇಳಲಾಗಿದೆ. ಇನ್ನು ಮುಂದೆ ಪತಿಯು ಪರಸ್ಥಳಕ್ಕೆ ಹೋದಾಗ ಏಕಚಾರಿಣಿ ನಾಯಿಕೆಯು ಹೇಗೆ ಆಚರಿಸಬೇಕೆಂಬುದನ್ನು ಸೂತ್ರಕಾರರು ಹೇಳುತ್ತಾರೆ.

ಪ್ರವಾಸೆ ಚ ಮಂಗಲಮಾತ್ರಾಭರಣಾ ದೇವತೋಪವಾಸಪರ ವಾರ್ತಾ-
ಯಾಂ ಸ್ಥಿತಾ ಗೃಹಾನವೇಕ್ಷೇತ ॥

ಪತಿಯು ಪ್ರವಾಸಕ್ಕೆ ಹೋದಾಗ ನಾಯಿಕೆಯು ಕೇವಲ ಸೌಭಾಗ್ಯ ಸೂಚಕ ಅಲಂಕಾರ ( ಕಾಡಿಗೆ ಬಳೆ ಇ. ) ಗಳನ್ನು ಧರಿಸಬೇಕು. ಇದಕ್ಕೂ ಹೆಚ್ಚಿನ ಯಾವ ಶೃಂಗಾರವನ್ನೂ ಮಾಡಿಕೊಳ್ಳಬಾರದು. ಪತಿಯ ಕಾರ್ಯಸಫಲತೆಗಾಗಿ, ಪತಿಯ ಉತ್ಕರ್ಷಕ್ಕಾಗಿ ಉಪವಾಸ ವ್ರತಗಳನ್ನು ಮಾಡಬೇಕು. ನಿತ್ಯವೂ ಪತಿಯ ಕ್ಷೇಮ ಸಮಾಚಾರದ ಸುದ್ದಿಯ ಕಡೆಗೆ ಲಕ್ಷ್ಯವಿಟ್ಟು, ಮನೆಯ ಕೆಲಸ ಕಾರ್ಯಗಳನ್ನು ಮಾಡಬೇಕು. ನಾಯಿಕೆಯು ಅತ್ತೆಯ ಹತ್ತಿರವೆ ತನ್ನ ಹಾಸಿಗೆಯನ್ನು ಹಾಸಬೇಕು. ಅಂದರೆ ಆಕೆಯ ಚಾರಿತ್ರ್ಯದ ಬಗ್ಗೆ ಯಾರಲ್ಲಿಯೂ ಸಂಶಯ ಉತ್ಪನ್ನವಾಗುವುದಿಲ್ಲ. ನಾಯಿಕೆಯು ಹಿರಿಯರ ಸಮ್ಮುಖದಲ್ಲಿಯೇ ಎಲ್ಲ ಕೆಲಸ ಕಾರ್ಯಗಳನ್ನು ಮಾಡುತ್ತಿದ್ದರೆ, ಅವರೆಲ್ಲರೂ ಇವಳಿಗೆ ಅನುಕೂಲರಾಗಿ ಹೆಚ್ಚಾಗಿ ಪ್ರೀತಿಸ ತೊಡಗುವರು. ಪತಿಗೆ ಪ್ರಿಯವಾದ ವಸ್ತುಗಳನ್ನು ದೊರಕಿಸಲು ಪ್ರಯತ್ನಿಸಬೇಕು. ಆದರೆ ಪತಿಷ್ಟವಾದ ಒಂದೇ ವಸ್ತುವನ್ನು ಮೇಲಿಂದಮೇಲೆ ದೊರಕಿಸಬಾರದು. ಪ್ರತಿಸಲಕ್ಕೂ ಅವು ಭಿನ್ನಭಿನ್ನವಾಗಿರಬೇಕು. ( ಮನುಷ್ಯ ಸ್ವಭಾವವು ವೈಚಿತ್ರ್ಯಾಕಾಂಕ್ಷೆಯುಳ್ಳದಾದುದರಿಂದ ಬೇರೆ ಬೇರೆ ವಸ್ತುಗಳಿದ್ದರೆ ಅವರಿಂದ ಪತಿಗೆ ಬೇಸರ ಬರುವುದಿಲ್ಲ. ) ಮತ್ತು ಹೀಗೆ ದೊರಕಿಸಿದ ವಸ್ತುಗಳು ಕೆಡದಂತೆ ರಕ್ಷಣೆ ಮಾಡುವ ಕಾರ್ಯದಲ್ಲಿ ದಕ್ಷತೆ ವಹಿಸಬೇಕು. ನಿತ್ಯ ಮತ್ತು ನೈಮಿತ್ತಿಕ ಕಾರ್ಯದಲ್ಲಿ ಅವಶ್ಯ

ವಿದ್ದಷ್ಟೇ ವ್ಯಯಮಾಡಬೇಕು. ಪತಿಯು ಆರಂಭಿಸಿದ ಕಾರ್ಯಗಳನ್ನು ಪೂರ್ಣಗೊಳಿಸುವದರ ಕಡೆಗೆ ವಿಶೇಷ ಗಮನಕೊಡಬೇಕು.

ಸ್ತ್ರೀಯರು ಯಾವುದಾದರೂ ವಿಶೇಷ ಕಾರ್ಯವಿರದೆ ತವರು ಮನೆಗೆ ಹೋಗುವುದು ಪ್ರಶಸ್ತವಲ್ಲ. ಪುತ್ರಶೋಕದಂಥ ಸಂಕಟ ಪ್ರಸಂಗದಲ್ಲಿ ಅಥವಾ ವಿವಾಹ ಕಾರ್ಯದಂಥ ಮಂಗಲ ಪ್ರಸಂಗಗಳಲ್ಲಿ ತವರು ಮನೆಯ ಕಡೆಗೆ ಹೋಗಲು ಅಡ್ಡಿಯಿಲ್ಲ. ತವರು ಮನೆಗೆ ಹೋಗುವಾಗ ತನ್ನ ಚಾರಿತ್ರ್ಯದ ವಿಷಯದಲ್ಲಿ ಚರ್ಚಿಸಲು ಎರಡನೆಯವರಿಗೆ ಅವಕಾಶ ದೊರೆಯದಂತೆ ಪತಿಯ ವಿಶ್ವಾಸವುಳ್ಳ ಸೇವಕರನ್ನು ಸಂಗಡ ಕರೆದು ಕೊಂಡು ಹೋಗಬೇಕು. ತವರು ಮನೆಯಲ್ಲಿ ಹೆಚ್ಚು ದಿವಸಗಳನ್ನು ಕಳೆಯುವುದರಿಂದ ಪತಿ, ಅತ್ತೆಮಾವಂದಿರು ಸಿಟ್ಟಾಗುವ ಸಂಭವವಿರುವುದ ರಿಂದ ಅಲ್ಲಿ ಹೆಚ್ಚು ದಿವಸವಿರಬಾರದು; ಅಲ್ಲದೆ ಆಗ ಪ್ರವಾಸಕ್ಕೆ ಯೋಗ್ಯ ವಾದ ವೇಷವನ್ನೂ ಧರಿಸಬಾರದು.

ಮನೆಯ ಹಿರಿಯರು ಸಮ್ಮತಿಕೊಟ್ಟ ಉಪವಾಸಾದಿ ಧರ್ಮಗಳನ್ನು ಮಾಡಬೇಕು. ಬಹು ದಿನಗಳಿಂದ ಕೆಲಸದಲ್ಲಿದ್ದ; ಪ್ರಾಮಾಣಿಕನೆಂದು ನಂಬಿಗೆಯುಳ್ಳ ಸೇವಕನಿಂದ ಮನೆಯ ತೋಟದಲ್ಲಿ ಬೆಳೆದ (ಮನೆಯವರು ಉಪಯೋಗಿಸಿ ಹೆಚ್ಚಿದ) ಹಣ್ಣು, ಹೂ ಮೊದಲಾದವುಗಳ ವ್ಯಾಪಾರ ವನ್ನು ಮಾಡಿಸಿ ದ್ರವ್ಯಸಂಗ್ರಹ ಮಾಡಬೇಕು. ವಿಶೇಷ ಕಾರ್ಯದಲ್ಲಿ ಹೆಚ್ಚು ದ್ರವ್ಯವ್ಯಯಮಾಡುವ ಪ್ರಸಂಗಬಂದಲ್ಲಿ ಹೀಗೆ ಸಂಗ್ರಹಿಸಿದ ಹಣದಲ್ಲಿಂದ ತೆಗೆದು ಖರ್ಚುಮಾಡಬೇಕು.

ಪತಿಯು ಪ್ರವಾಸದಿಂದ ಮರುಳಿ ಬಂದನಂತರ ಮೈಮೇಲೆ ಪ್ರವಾಸ ವೇಶವಿದ್ದಾಗಲೇ ಪತ್ನಿಯು ಪ್ರಥಮ ಭೆಟ್ಟಿಯನ್ನು ಕೊಡಬೇಕು. ಅಂದರೆ ಅವನಿಗೆ ತಾನಿಲ್ಲದಾಗ ತನ್ನ ಸ್ತ್ರೀಯು ಹೇಗೆ ನಡೆದುಕೊಳ್ಳುತ್ತಿದ್ದಳೆಂಬುದು ತಿಳಿಯುತ್ತದೆ. ನಾಯಿಕೆಯು ಶೃಂಗರಿಸಿಕೊಂಡು ಪತಿಗೆ ಭೆಟ್ಟಿಯಾದರೆ ಅವನಿಲ್ಲದಾಗ ಅವಳು ಹೇಗೆ ಆಚರಿಸುತ್ತಿದ್ದಳೆಂಬುದರ ಕಲ್ಪನೆ ಆತನಿಗೆ ಆಗಲಾರದು; ಇದರಿಂದ ಒಮ್ಮೊಮ್ಮೆ ಮನಃಕ್ಲೇಶವೂ ಉತ್ಪನ್ನವಾಗ ಬಹುದು. ಪತಿಯ ಭೆಟ್ಟಿಯಾದನಂತರ ಸೇವಿಕೆಯರ ಜೊತೆಗೂಡಿ ದೇವರ ಪೂಜೆಯನ್ನು ಮಾಡಿ ಬೇಡಿಕೊಂಡ ಹರಿಕೆಯನ್ನು ಮುಟ್ಟಿಸಬೇಕು.

ಏಕಚಾರಿಣಿವೃತ್ತ ಮತ್ತು ಪ್ರವಾಸಕರ್ಮ ಈ ಎರಡೂ ಪ್ರಕರಣಗಳನ್ನು ಒಂದೆಡೆಗೆ ಕೂಡಿಸುವ ಎರಡು ಶ್ಲೋಕಗಳು ಕೆಳಗೆ ಬರೆದಂತೆ ಇರುತ್ತವೆ.

ಭವತಶ್ಚಾತ್ರ ಶ್ಲೋಕೌ—
ಸದ್ವೃತ್ತಮನುವರ್ತೇತ ನಾಯಕಸ್ಯ ಹಿತೌಷಿಣೀ ।
ಕುಲಯೋಷಾ ಪುನರ್ಭೂರ್ವಾ ವೇಶ್ಯಾ ವಾಪ್ಯೇಕಚಾರಿಣೀ ॥
ಧರ್ಮಮರ್ಥಂ ತಥಾ ಕಾಮಂ ಸ್ಥಾನಮೇವ ಚ ।
ನಿಃಸಪತ್ನಂ ಚ ಬರ್ತಾರಂ ನಾರ್ಯಃ ಸದ್ವೃತ್ತಮಾಶ್ರಿತಾಃ ॥

ಪತಿಯು ಮನೆಯಲ್ಲಿರಲಿ ಇಲ್ಲವೆ ಪ್ರವಾಸಕ್ಕೆ ಹೋಗಿರಲಿ, ತಾನು ಆತನ ಹಿತವನ್ನೇ ಚಿಂತಿಸುತ್ತಿರುವೆ ಎಂದೂ ಕಪಟತನದಿಂದ ವರ್ತನವನ್ನಿಟ್ಟಿಲ್ಲ ಎಂಬುದನ್ನೂ ತೋರಿಸುವುದಕ್ಕಾಗಿ ವಿವಾಹಿತ ಕುಲೀನ ಸ್ತ್ರೀ, ಪುನರ್ಭೂ ಸ್ತ್ರೀ ಮತ್ತು ಒಂದೇ ಪುರುಷನ ಸಂಬಂಧವನ್ನಿಟ್ಟ ವೇಶ್ಯೆಯು ಯಾವಾಗಲೂ ಸದಾಚರಣೆಯುಳ್ಳವರಿರಬೇಕು. ಯಾವುದೇ ಸ್ತ್ರೀಯು ಸದಾಚರಣೆಯುಳ್ಳವಳಾದರೆ ಅವಳಿಗೆ ಕೆಳಗಿನಂತೆ ಫಲಪ್ರಾಪ್ತಿಯಾಗುತ್ತದೆ ಎಂದು ಶ್ರೀ ವಾತ್ಸ್ಯಾಯನ ಮುನಿಗಳು ಅಭಿಪ್ರಾಯ ಪಡುವರು.

ಸದಾಚರಣೆಯುಳ್ಳ ಸ್ತ್ರೀಯರಿಗೆ ಧರ್ಮ, ಅರ್ಥ, ಕಾಮ ಮತ್ತು ಓರಿಗೆಯವರಲ್ಲಿ ಮರ್ಯಾದೆ ದೊರೆತು ನಿಜವಾದ ಸಂಸಾರ ಸುಖವು ದೊರೆಯುತ್ತದೆ.

ಇದರಂತೆ ಶ್ರೀ ವಾತ್ಸ್ಯಾಯನ ಮುನಿಕೃತ ಮೂಲ ಸಂಸ್ಕೃತ ಕಾಮಸೂತ್ರದಲ್ಲಿಯ ಭಾರ್ಯಾದಿಕಾರಿಕವೆಂಬ ಅಧಿಕರಣದಲ್ಲಿಯ ಏಕಚಾರಿಣಿವೃತ್ತವೆಂಬ ಪ್ರಕರಣವು ಸಮಾಪ್ತವಾಯಿತು.



## ಅಧ್ಯಾಯ : ೨

# ಸಪತ್ನಿಷು ಜ್ಯೇಷ್ಠಾವೃತ್ತ ಪ್ರಕರಣಂ

ಸವತಿಯುಳಿದ್ದರೆ ಆಕೆಯ ಜೊತೆಗೆ ಹೇಗೆ ವರ್ತಿಸಬೇಕು; ಅದರಂತೆ ಅನೇಕ ಜನ ಸವತಿಯರಿದ್ದರೆ ಅದರಲ್ಲಿ ಹಿರಿಯ ಸವತಿಯು ಚಿಕ್ಕ ಸವತಿಯರ ಜತೆಗೆ ಹೇಗೆ ನಡೆದುಕೊಳ್ಳಬೇಕೆಂಬ ಸಂಗತಿಯನ್ನು ತಿಳಿಸುವ ಮೊದಲು ಸವತಿಯು ಮನೆಗೆ ಬರುವ ಕಾರಣವನ್ನು ಮೊದಲಿಗೆ ಸೂತ್ರಕಾರರು ಹೇಳುತ್ತಾರೆ.

ನಾಯಿಕೆಯ ನಡತೆಯಲ್ಲಿ ಏನಾದರೂ ಕಪಟವು ಕಂಡುಬಂದಲ್ಲಿ, ಇಲ್ಲವೆ ಆಕೆಯ ವರ್ತನದಲ್ಲಿ ಏನಾದರೂ ಅಕ್ಷಮ್ಯ ಗೌಣ ಪ್ರಕಾರವು ಕಂಡುಬಂದಲ್ಲಿ, ನಾಯಿಕೆಯು ಬಂಜೆಯೆಂದು ತಿಳಿದುಬಂದರೆ, ಪ್ರತಿಸಲವೂ ಹೆಣ್ಣುಮಕ್ಕಳನ್ನೇ ಹಡೆಯಹತ್ತಿದರೆ, ನಾಯಕನು ಎರಡನೆಯ ಲಗ್ನವನ್ನು ಮಾಡಿಕೊಂಡು ಸವತಿಯನ್ನು ತರುವನು. ಮೇಲಿನಂತೆ ನಾಯಿಕೆಯ ತಿರಸ್ಕಾರದಿಂದ ನಾಯಕನು ಸವತಿಯನ್ನು ತರುವಂತೆ ತನ್ನ ಅವಮರ್ಯಾದಿತವಾದ ಕಾಮುಕ ಪ್ರವೃತ್ತಿಯನ್ನು ಶಾಂತಗೊಳಿಸಲೂ ಕೂಡ ಸವತಿಯನ್ನು ಮನೆಗೆ ತರುವನು.

**ತದಾದಿತ ಏವ ಭಕ್ತಿಶೀಲವೈದಗ್ಧ್ಯಖ್ಯಾಪನೇನ ಪರಿಜಿಹೀರ್ಷೇತ್॥**

ಅದಕ್ಕಾಗಿಯೇ ಲಗ್ನವಾದಕೂಡಲೇ ನಾಯಿಕೆಯು ಮೊದಲಿನಿಂದಲೂ ನಾಯಕನ ವಿಷಯದಲ್ಲಿ ಭಕ್ತಿಯನ್ನು ತೋರಿಸಬೇಕು. ತನ್ನ ಚಾರಿತ್ರ್ಯದ ವಿಷಯದಲ್ಲಿ ಚರ್ಚಿಸಲು ಎರಡನೆಯವರಿಗೆ ಅವಕಾಶ ಸಿಗದಂತೆ ಮಾಡಬೇಕು. ತನ್ನ ಭಕ್ತಿ-ಚಾತುರ್ಯಗಳನ್ನು ವ್ಯಕ್ತಗೊಳಿಸಬೇಕು. ಅಂದರೆ ನಾಯಕನಿಗೆ ಎರಡನೆಯ ಲಗ್ನಮಾಡಿಕೊಂಡು ಮನೆಗೆ ಸವತಿಯನ್ನು ತರುವ ಅವಶ್ಯಕತೆಯುಂಟಾಗಲಾರದು.

ತನಗೆ ಖಂಡಿತ ಮಕ್ಕಳಾಗುವುದಿಲ್ಲವೆಂದು ತಿಳಿದನಂತರ ನಾಯಿಕೆಯು ಸ್ವತಃ ನಾಯಕನಿಗೆ ಎರಡನೆಯ ಲಗ್ನಮಾಡಿಕೊಳ್ಳಲು ವಿನಂತಿಯನ್ನು ಮಾಡಿಕೊಳ್ಳಬೇಕು. ಇಲ್ಲದಿದ್ದರೆ ನಾಯಕನು ತಾನೇ ಎರಡನೆಯ

ವಿವಾಹವನ್ನು ಮಾಡಿಕೊಳ್ಳುವನು. ಇದಕ್ಕೆ ನಾಯಿಕೆಯು ತನ್ನ ಒಪ್ಪಿಗೆಯನ್ನೀಯದಿದ್ದರೆ ಅವಳ ಮೇಲಿನ ನಾಯಕನ ಪ್ರೀತಿಯು ಇಲ್ಲದಂತಾಗುವುದು. ಪ್ರತಿಸಲವೂ ಹೆಣ್ಣೇ ಹುಟ್ಟುಹತ್ತಿದರೆ ನಾಯಿಕೆಯು ಎರಡನೆಯ ಲಗ್ನಕ್ಕಾಗಿ ನಾಯಕನಿಗೆ ಒತ್ತಾಯ ಪಡಿಸಬೇಕು. ಯಾಕಂದರೆ ವಿವಾಹವು ಪುತ್ರಪ್ರಾಪ್ತಿಗಾಗಿ ಎಂದು ಶಾಸ್ತ್ರವು ಸಾರುತ್ತದೆ; ಅದು ಪ್ರಸ್ತುತ ಸೂತ್ರಕಾರರಿಗೆ ಮಾನ್ಯವೂ ಇದೆ.

ನಾಯಕನು ಎರಡನೆಯ ವಿವಾಹಕ್ಕೆ ಸಿದ್ಧನಿರುವನೆಂಬುದು ತಿಳಿದ ನಂತರ ನಾಯಕನು ಯಾವ ಸ್ತ್ರೀಯೊಂದಿಗೆ ವಿವಾಹ ಮಾಡಿಕೊಳ್ಳಲು ಪ್ರಯತ್ನ ನಡೆಯಿಸಿರುವನೋ ಆಕೆಗಿಂತಲೂ ತಾನು ಗುಣದಲ್ಲಿ ಶ್ರೇಷ್ಠಳೆಂಬುದನ್ನು ನಾಯಕನಿಗೆ ತೋರಿಸುವ ಪ್ರಯತ್ನಮಾಡಬೇಕು.

---

## ಜ್ಯೇಷ್ಠಾವೃತ್ತನಾಮಕ ಪ್ರಕರಣ

**ಆಗತಾಂ ಚೈನಾಂ ಭಗಿನಿಕಾವದೀಕ್ಷೇತ ॥**

ಹೊಸದಾಗಿ ಸವತಿಯು ಮನೆಗೆ ಬಂದನಂತರ ಆಕೆಯನ್ನು ತನ್ನ ತಂಗಿಯಂತೆ ನಡೆಯಿಸಬೇಕು. ಸಾಯಂಕಾಲದಲ್ಲಿ ಸವತಿಗೆ ಮಾಡುವ ಎಲ್ಲ ವಸ್ತ್ರಾಲಂಕಾರಗಳನ್ನು ಆಕೆಯು ಬೇಡವೆಂದರೂ ನಾಯಿಕೆಯು ಪರಿಚಾರಿಕೆಯ ಕಡೆಯಿಂದ ನಾಯಕನು ಅವನ್ನು ನೋಡಿದಲ್ಲಿ ತಾನು ಮಾಡಿಸಿದ್ದೆಂಬುದನ್ನು ಸಹಜವಾಗಿ ತಿಳಿಯಲು ಬರುವಂತೆ ಮಾಡಿಸಬೇಕು. ಅದರ ಮೂಲಕವಾಗಿಯೇ ನಾಯಿಕೆಯು ನಾಯಕನ ಮೇಲಿನ ತನ್ನ ಪ್ರೇಮವನ್ನು ವ್ಯಕ್ತಪಡಿಸಬೇಕು.

ಸೌಂದರ್ಯದ ಅಭಿಮಾನದಿಂದ ಅಥವಾ ಪತಿಯು ತನ್ನನ್ನೇ ಹೆಚ್ಚಾಗಿ ಪ್ರೀತಿಸುವನೆಂಬ ಅಹಂಕಾರದಿಂದ ಸವತಿಯು ಏನಾದರೂ ಹುಚ್ಚು ಮಾತನಾಡಿದರೆ, ನಾಯಿಕೆಯು ಆಕೆಯ ಮಾತಿನ ಕಡೆಗೆ ಇಲ್ಲವೆ ಗರ್ವಯುಕ್ತ ಮನಃಸ್ಥಿತಿಯ ಕಡೆಗೆ ಸ್ವಲ್ಪವೂ ಲಕ್ಷಕೊಡಬಾರದು.

ಯಾಕಂದರೆ ಅದರಿಂದ ಕೆಲವು ಸಲ ಅಪಮಾನವಾಗಬಹುದು. ನಾಯಕನ ಸೇವೆಮಾಡುವಲ್ಲಿ ಸವತಿಯು ಏನಾದರೂ ತಪ್ಪುತಡೆಗಳನ್ನು ಮಾಡಿದರೆ ಅತ್ತ ನಾಯಿಕೆಯು ದುರ್ಲಕ್ಷ್ಯಮಾಡಬೇಕು. ಇಂಥ ತಪ್ಪುಗಳು ಅವಳಿಂದ ಮೇಲಿಂದ ಮೇಲೆ ಆಗಹತ್ತಿದರೆ ಅದರಿಂದ ಸಹಜವಾಗಿಯೇ ಅವಳು ನಾಯಕನ ಅಪ್ರೀತಿಗೆ ಕಾರಣಳಾಗಿ, ನಾಯಕನು ನಾಯಿಕೆಯ ಮೇಲೆ ಪ್ರೀತಿಮಾಡಹತ್ತುವನು. ಆದರಂತೆಯೇ ಸವತಿಯಿಂದಾದ ತಪ್ಪು ಸವತಿಗೇ ತಿಳಿಯಬಹುದಾದಲ್ಲಿ ನಾಯಿಕೆಯು ಅದನ್ನು ಸದ್ಭಾವನೆಯಿಂದ ಅವಳಿಗೆ ತಿಳಿಸಿಹೇಳಬೇಕು. ಮತ್ತೊಮ್ಮೆ ಹೀಗೆ ತಪ್ಪು ಮಾಡದಂತೆ ತಿಳಿಸಬೇಕು. ಹೀಗೆ ಮಾಡುವುದರಿಂದ ನಾಯಿಕೆಯು ತನ್ನನ್ನು ಪ್ರೀತಿಸುತ್ತಿರುವಳೆಂದು ಸವತಿಗೆ ತಿಳಿಯುವುದು; ಮತ್ತು ತಾನೂ ನಾಯಿಕೆಯನ್ನು ಪ್ರೀತಿಸಹತ್ತುವಳು.

ಸಂತತಿ ಇಲ್ಲದ ನಾಯಿಕೆಯು ಸವತಿಯ ಮಕ್ಕಳ ಮೇಲೆ ವಿಶೇಷ ಆದರ ತೋರಿಸಬೇಕು. ಸವತಿಯ ಸೇವಕ ಜನರು ನಾಯಕನಿಗೆ ಪ್ರಿಯರಾದಲ್ಲಿ ಅವರ ಮೇಲೆಯೂ ದಯೆ ತೋರಿಸುತ್ತಿರಬೇಕು. ಸವತಿಯ ವಿವಾಹ ಸಮಯದಲ್ಲಿ ಕೂಡಿದಂಥ ಸವತಿಯ ಮಿತ್ರಗಣದ ವಿಷಯದಲ್ಲಿ ವಿಶೇಷ ಆಸ್ಥೆಯನ್ನು ವಹಿಸಬೇಕು. ತನ್ನ ಆಪ್ತೇಷ್ಟರನ್ನೇ ಹೆಚ್ಚಾಗಿ ಹೊಗಳದೆ, ಸವತಿಯ ಆಪ್ತೇಷ್ಟರನ್ನೇ ಹೆಚ್ಚಾಗಿ ಹೊಗಳಬೇಕು. ಅಂದರೆ ಪಕ್ಷಪಾತದ ದೋಷಬರಲಾರದು; ಅಲ್ಲದೆ ಸವತಿಯಲ್ಲಿ ಸವತೀ ಮತ್ಸರವು ಇಲ್ಲದಂತಾಗಿ ನಾಯಿಕೆಯ ಮೇಲೆ ಪ್ರೇಮವು ಹೆಚ್ಚಾಗಬಹುದು. ಅನೇಕ ಜನ ಸವತಿಯರಿದ್ದಲ್ಲಿ ತನಗಿಂತಲೂ ಚಿಕ್ಕ ಅಂದರೆ ತನ್ನ ವಿವಾಹದ ನಂತರವೇ ಮೊದಲಿಗೆ ವಿವಾಹವಾದ ಸವತಿಯ ಜೊತೆಗೆ ವಿಶೇಷ ಸಹವಾಸವನ್ನಿಡಬೇಕು. ಯಾಕಂದರೆ ಉಳಿದ ಸವತಿಯರಿಗಿಂತ ಅವಳ ಪರಿಚಯವು ಹೆಚ್ಚಾಗಿದ್ದು ಅವಳ ಸ್ವಭಾವವು ಚೆನ್ನಾಪಿ ತಿಳಿದಿರುತ್ತದೆ.

ನಾಯಿಕೆಗೆ ಅನೇಕ ಜನ ಸವತಿಯರಿದ್ದಲ್ಲಿ ಅವರಲ್ಲಿ ನಾಯಕನು ಯಾರಲ್ಲಿ ಹೆಚ್ಚುಪ್ರೇಮತೋರಿಸಿ, ಯಾವಳ ಸನ್ಮಾನ ಮಾಡುವನೋ ಅಂಥವಳಿಗೆ ಪ್ರೋತ್ಸಾಹನವನ್ನುತೋರಿಸಬೇಕು. ಮತ್ತು ಮೊದಲಿಗೆ ನಾಯಕನು ಯಾರನ್ನು ಪ್ರೀತಿಸುತ್ತಿದ್ದನೋ ಅಂಥವಳಿಗೆ ಈಗ ನಾಯಕನು ನಿನ್ನನ್ನು

ಏಕೆ ಪ್ರೀತಿಸುವುದಿಲ್ಲವೆಂಬ ಕಾರಣವನ್ನು ತಿಳಿಸಿ, ಈಗ ನಾಯಕನ ಪ್ರೀತಿಗೆ ಪಾತ್ರಳಾದವಳಿಗೂ ಮೊದಲಿಗೆ ಪ್ರೀತಿಗೆ ಪಾತ್ರಳಾಗಿದ್ದವಳಿಗೂ ಗುಪ್ತವಾಗಿ ಜಗಳ ಹಚ್ಚಬೇಕು. ಈ ಜಗಳವು ವಿಕೋಪಕ್ಕೆ ಹೋದ ನಂತರ ಅದನ್ನು ಶಾಂತಗೊಳಿಸಲು ನಾಯಕನ ಮುಂದೆ ಪ್ರಯತ್ನಮಾಡ ಬೇಕು. ಅನ್ಯ ಸವತಿಯರ ಜೊತೆಗೆ ಸೌಖ್ಯ ಬೆಳಸಿಕೊಂಡು ಅವರೆಲ್ಲ ಒಕ್ಕಟ್ಟಿನಿಂದ ಇರಹತ್ತಿದರೆ, ಆ ಸಂಬಂಧದಲ್ಲಿ ನಾಯಿಕೆಯು ತಾನಾಗಿಯೇ ಏನನ್ನೂ ಹೇಳದೆ, ನಾಯಕನ ಪ್ರೇಮವು ಯಾವ ಕಾರಣಕ್ಕಾಗಿ ಅವರ ಮೇಲೆ ಕೂತಿದೆಯೋ ಆ ಕಾರಣವು ಯೋಗ್ಯವಾದುದಲ್ಲವೆಂಬುದನ್ನು ತೋರಿಸಿ ಕೊಡಬೇಕು. ಹೀಗೆ ಮಾಡುವುದರಿಂದ ನಾಯಕನ ಪ್ರೇಮವು ಸಹಜವಾಗಿಯೇ ಮತ್ತೆ ನಾಯಿಕೆಯ ಕಡೆಗೆ ಹೊರಳುವುದು.

ಮೇಲಿನಂತೆ ನಾಯಕನ ಜೊತೆಗೆ ಸವತಿಯರ ಕಲಹವು ಪ್ರಾರಂಭವಾಗುವುದು. ಆಗ ನಾಯಿಕೆಯು ಸವತಿಯ ಪಕ್ಷಕ್ಕೆ ಕೂಡಿ ಕೊಂಡು ಅವಳಿಗೆ ಹುರುಪನ್ನು ಕೊಡಬೇಕು. ಆಕೆಯ ಕಡೆಯಿಂದ ನಾಯಕನಿಗೆ ಪ್ರತ್ಯುತ್ತರಗಳನ್ನು ಕೊಡಿಸಬೇಕು. ಇದರಿಂದ ಸಹಜ ವಾಗಿಯೇ ಅವರವರಲ್ಲಿ ಮನಸ್ತಾಪವು ಬೆಳೆಯುತ್ತದೆ. ಜಗಳವು ಕಡಿಮೆ ಯಾಗುವಂತೆ ಕಂಡುಬಂದಲ್ಲಿ ನಾಯಿಕೆಯು ಅದನ್ನು ಮತ್ತಷ್ಟು ಬೆಳೆಯಿಸ ಬೇಕು. ಇಷ್ಟಾದರೂ ನಾಯಿಕನು ಕಲಹ ಮಾಡಿದವಳನ್ನು ಪ್ರೀತಿಸ ಹತ್ತಿದರೆ ನಾಯಿಕೆಯು ಸ್ವತಃ ಮಧ್ಯಸ್ತಗಾರಳಾಗಿ ಆ ಜಗಳವನ್ನು ನಿಲ್ಲಿಸ ಬೇಕು. ಅಂದರೆ ನಾಯಕನ ಪ್ರೀತಿಯು ಮತ್ತೆ ನಾಯಿಕೆಯ ಕಡೆಗೆ ಹೊರಳಬಹುದು.

---

## ಕನಿಷ್ಠಾವೃತ್ತ ಪ್ರಕರಣ

ಮೇಲಿನ ಪ್ರಕರಣದಲ್ಲಿ ಸೂತ್ರಕಾರರು ಹಿರಿಯ ಸವತಿಯ ಆಚರಣೆ ಯನ್ನು ತಿಳಿಸಿದರು. ಈ ಪ್ರಕರಣದಲ್ಲಿ ಚಿಕ್ಕ ಸವತಿಯು ಯಾವ ಪ್ರಕಾರ ತನ್ನ ವರ್ತನವನ್ನಿಡಬೇಕೆಂಬುದನ್ನು ಕೆಳಗಿನಂತೆ ತಿಳಿಸುತ್ತಾರೆ.

ಕನಿಷ್ಠಾ ತು ಮಾತೃವತ್ಸಪತ್ನೀಂ ಪಶ್ಯೇತ್ ॥

ಚಿಕ್ಕ ಸವತಿಯು ತನಗಿಂತಲೂ ಹಿರಿಯಳಾದ ಸವತಿಗೆ ತನ್ನ ತಾಯಿಗೆ ತೋರಿಸುವಂತೆ ಮಾನ ಸನ್ಮಾನವನ್ನು ತೋರಿಸಬೇಕು. ಯಾವುದಾದರೊಂದು ವಸ್ತುವನ್ನು ತನ್ನ ತವರುಮನೆಯವರೇ ಕೊಟ್ಟಿರಲಿ, ಗಂಡನೇ ಕೊಟ್ಟಿರಲಿ, ಯಾರೇ ಕೊಟ್ಟಿದ್ದರೂ ಹಿರಿಯ ಸವತಿಗೆ ಅದನ್ನು ತೋರಿಸದೆ, ಅದನ್ನು ಉಪಯೋಗದಲ್ಲಿ ತರಬಾರದು.

ತನಗೆ ಒಪ್ಪಿಸಿದ ಯಾವುದೇ ಕೆಲಸವನ್ನು ಮಾಡುವಾಗ ಹಿರಿಯ ಸವತಿಯ ಮೇಲ್ವಿಚಾರಣೆಯಲ್ಲಿ ಮಾಡಬೇಕು. ಗಂಡನ ಹತ್ತಿರ ಮಲಗಿಕೊಳ್ಳುವ ಸರತಿಯು ಬಂದಾಗಲೂ ಕೂಡ ಹಿರಿಯ ಸವತಿಯ ಒಪ್ಪಿಗೆಯನ್ನು ಪಡೆದು ಗಂಡನಹತ್ತಿರ ಹೋಗಬೇಕು. ಹಿರಿಯ ಸವತಿಯು ಆಡಿದ ಯಾವುದೇ ಒಳಿತು ಕೆಟ್ಟ ಮಾತುಗಳನ್ನು ಜಗಳವಾಗಬಾರದೆಂದು ಇತರ ಸವತಿಯರ ಮುಂದೆ ಹೇಳಬಾರದು. ಸವತಿಯ ಮಕ್ಕಳು ತನ್ನ ಮಕ್ಕಳಿಗಿಂತ ಚಿಕ್ಕ ದೊಡ್ಡವಿದ್ದರೂ ಅವುಗಳ ಮೇಲೆ ತನ್ನ ಮಕ್ಕಳಿಗಿಂತಲೂ ಹೆಚ್ಚಾಗಿ ಪ್ರೀತಿ ತೋರಿಸಬೇಕು. ಎಲ್ಲ ಸ್ತ್ರೀಯರಿಗಿಂತಲೂ ಪತಿಯು ತನ್ನನ್ನು ಹೆಚ್ಚಾಗಿ ಪ್ರೀತಿಸುವಂತೆ ಏಕಾಂತದಲ್ಲಿ ಪತಿಯ ಸೇವೆಯನ್ನು ಹೆಚ್ಚಾಗಿ ಮಾಡಬೇಕು. ಸವತಿಯು ತನ್ನನ್ನು ಅಪಮಾನಗೊಳಿಸಿದರೆ, ಆ ಅವಮಾನದ ದುಃಖವನ್ನು ಸ್ವತಃ ತಾನೇ ಪತಿಯ ಮುಂದೆ ಎಂದೂ ಹೇಳಬಾರದು; ಎರಡನೆಯರ ಕಡೆಯಿಂದ ಹೇಳಿಸಬೇಕು. ಯಾಕಂದರೆ ತಾನೇ ಪತಿಯ ಮುಂದೆ ಹೇಳುವುದರಿಂದ ಅವನಿಗೆ ಅದು ನಿಜವೆನಿಸಲಾರದು. ಉಳಿದ ಸವತಿಯರಿಗಿಂತಲೂ ಪತಿಯು ತನ್ನನ್ನೇ ಏಕಾಂತದಲ್ಲಿ ಹೆಚ್ಚಾಗಿ ಆದರಿಸುವಂತೆ ಪ್ರಯತ್ನಮಾಡಬೇಕು. ಹೀಗೆ ವಿಶೇಷ ಆದರ ಸಿಕ್ಕರೇ ಮಾತ್ರ ಈ ಸವತಿಯರ ಮತ್ಸರದಲ್ಲಿ ನನ್ನ ಜೀವವು ಉಳಿಯುವುದೆಂದುದನ್ನು ಪತಿಗೆ ತಿಳಿಸಬೇಕು. ಪತಿಯು ಅದರಂತೆ ಆದರ ತೋರಿಸಿದರೆ ಅದನ್ನು ಗರ್ವದಿಂದ ಇಲ್ಲವೆ ಸವತಿಯರ ಮೇಲಿನ ಸಿಟ್ಟಿನಿಂದ ಬೇರೆಯವರಿಗೆ ತಿಳಿಸಬಾರದು. ಯಾಕಂದರೆ ಏಕಾಂತದಲ್ಲಿ ಪತಿಯು ಇವಳ ಪ್ರೇಮಮಾಡುವನೆಂಬ ಸಂಗತಿಯು ಪರರಿಗೆ ತಿಳಿಯುವುದರಿಂದ ಅವಳು ಗಂಡನ ತಿರಸ್ಕಾರಕ್ಕೆ ಪಾತ್ರಳಾಗುವಳೆಂದು ಗೋನರ್ಧೀಯನು ಅಭಿಪ್ರಾಯ

ಪಡುವನು. ಪತಿಯಿಂದ ಏಕಾಂತದಲ್ಲಿ ದೊರೆತ ಸನ್ಮಾನವು ಗುಪ್ತವಾಗಿರದಿದ್ದರೆ. ಅದು ಹಿರಿಯ ಸವತಿಗೆ ತಿಳಿದುಬಂದರೆ ಅವಳು ಸಿಟ್ಟಾಗಿ ಯಾವುದಾದರೆಂದು ಹೊಸ ಸಂಕಟವನ್ನು ನಿರ್ಮಾಣಮಾಡಬಹುದು. ಹಿರಿಯ ಸವತಿಗೆ ಮಕ್ಕಳಾಗದ್ದರಿಂದ ಗಂಡನ ಅವಕೃಪೆಗೆ ಪಾತ್ರಳಾಗಿದ್ದರೆ ಅಂಥವಳ ತಿರಸ್ಕಾರವನ್ನು ಮಾಡಬಾರದು. ತನ್ನ ಸದುದ್ದೇಶವನ್ನು ವ್ಯಕ್ತಮಾಡಲು ಪತಿಯು ಹಿರಿಯ ಸವತಿಯನ್ನು ಪ್ರೇಮದಿಂದ ಮಾತನಾಡಿಸುವಂತೆ ಯುಕ್ತಿಯನ್ನು ಮಾಡಬೇಕು. ಈ ಪ್ರಕಾರವಾಗಿ ಹಿರಿಯ ಸವತಿಯನ್ನು ಹಿಂದಕ್ಕೆ ಹಾಕಿ ಚಿಕ್ಕ ಸವತಿಯು ಪತಿಯು ಸದಾಕಾಲವೂ ತನ್ನಲ್ಲಿ ಏಕನಿಷ್ಟನಾಗಿರುವಂತೆ ಆಚರಿಸಬೇಕು. ಸವತಿಯರು ಬಹುಜನರಿದ್ದಲ್ಲಿ ಯಾವಾಗಲೂ ಚಿಕ್ಕವಳು ತನಗಿಂತ ಮೊದಲು ಲಗ್ನವಾದ, ಅವಳ ಲಗ್ನದ ನಂತರ ತನ್ನ ಲಗ್ನವಾದವಳನ್ನು ಹಿರಿಯಳೆಂದು ತಿಳಿದುಕೊಳ್ಳತಕ್ಕದ್ದು.

---

## ಪುನರ್ಭೂವೃತ್ತ ಪ್ರಕರಣ

ಕನ್ಯೆ ನಾಯಿಕೆಯು ಭಾರ್ಯೆಯಾಗುವಂತೆ ಪುನರ್ಭೂ ನಾಯಿಕೆಯೂ ಭಾರ್ಯೆಯಾಗುವಳು. ಆದಕ್ಕಾಗಿ ಪುನರ್ಭೂ ನಾಯಿಕೆಯ ವರ್ತನವು ಯಾವ ಪ್ರಕಾರ ಇರಬೇಕೆಂಬುದನ್ನು ಸೂತ್ರಕಾರರು ಇಲ್ಲಿ ಪ್ರತ್ಯೇಕವಾಗಿ ವರ್ಣಿಸುವವರಿರುವರು. ಕ್ಷತಯೋನಿ ಮತ್ತು ಅಕ್ಷತಯೋನಿ ಎಂದು ಪುನರ್ಭೂ ನಾಯಿಕೆಯರಲ್ಲಿ ಎರಡು ಪ್ರಕಾರಗಳಿರುತ್ತವೆಂಬುದನ್ನು ಈ ಹಿಂದೆಯೇ ಹೇಳಲಾಗಿದೆ. ಅವುಗಳಲ್ಲಿ ಅಕ್ಷತಯೋನಿ ಪುನರ್ಭೂ ನಾಯಿಕೆಯು ಮತ್ತೆ ವಿವಾಹ ಸಂಸ್ಕಾರಕ್ಕೆ ಬರುತ್ತಿರುವುದರಿಂದ ಅವಳು ಕನ್ಯೆ ನಾಯಿಕೆಯಲ್ಲಿಯೇ ಸಮಾವೇಶಗೊಳ್ಳುವಳು. ಇದಕ್ಕೆ ಪೂರಕವಾಗಿ ಧರ್ಮ ಶಾಸ್ತ್ರದಲ್ಲಿಯ "ವಿಧವಾ ಸ್ತ್ರೀಯು ಅಕ್ಷತಯೋನಿಯುಳ್ಳವಳಿದ್ದರೆ ಯಥಾವಿಧಿ ಅವಳ ವಿವಾಹಮಾಡಲು ಬರುತ್ತದೆ." ಎಂಬ ವಚನವು ಇಲ್ಲಿ ಅನ್ವಯಿಸುತ್ತದೆ. ಆದರೆ ಕ್ಷತಯೋನಿ ವಿಧವೆಗೆ ವಿವಾಹ ಸಂಸ್ಕಾರ

ಮಾಡಲು ಬರುವುದಿಲ್ಲ. ಕೇವಲ ಉಪಭೋಗಕ್ಕಾಗಿ ಅವಳನ್ನು ಮನೆಯಲ್ಲಿ ಇಟ್ಟುಕೊಳ್ಳಬೇಕು. ಇಂಥ ಸ್ತ್ರೀಯರಿಗೆ ರೂಢಿಯಲ್ಲಿ 'ಅವರುದ್ಧಾ' ಎಂದೆನ್ನುವರು. ಧರ್ಮಶಾಸ್ತ್ರಕಾರರು ಕ್ಷತಯೋನಿ ವಿಧವೆಯನ್ನು ಉಪಭೋಗಕ್ಕಾಗಿ ಮನೆಯಲ್ಲಿಟ್ಟುಕೊಳ್ಳಲು ಒಪ್ಪಿಗೆಕೊಟ್ಟಿರುವರು. ಮನೋದತ್ತಾ, ವಚೋದತ್ತಾ ಮಂಗಲವಾಚಿಕಾ, ಉದಕಸ್ಪರ್ಶಿಕಾ, ಪಾಣಿಗೃಹೀತಿಕಾ ಮತ್ತು ಅಗ್ನಿಪರಿಗತಾ ಎಂದು ಆರು ಪ್ರಕಾರದ ಅಕ್ಷತಯೋನಿಗಳನ್ನು ವಶಿಷ್ಠರು ಹೇಳಿರುವರು ಇವರೆಲ್ಲರೂ ಕನ್ಯೆ ನಾಯಿಕೆಯರಲ್ಲಿ ಬರುವುದರಿಂದ ಅವರ ವರ್ಣನೆಯು ಕನ್ಯೆ ನಾಯಿಕೆಯಂತೆಯೇ ಇದೆ. ಇಲ್ಲಿ ಪ್ರಸವಾ=ಕ್ಷತಯೋನಿ ನಾಯಿಕೆಯನ್ನು ಉದ್ದೇಶಿಸಿಯೇ ಸೂತ್ರಕಾರರು ಮುಂದಿನಂತೆ ಹೇಳುತ್ತಾರೆ.

**ವಿಧವಾ ತ್ವಿಂದ್ರಿಯದೌರ್ಬಲ್ಯಾದಾತುರಾ ಭೋಗಿನಂ ಗುಣಸಂಪನ್ನಂ ಚ ಯಾ ಪುನರ್ವಿಂದೇತ್ಸಾ ಪುನರ್ಭೂಃ ॥**

ಪ್ರಥಮ ಪತಿಯು ಮರಣಹೊಂದಿದ ನಂತರ ವಿಧವೆಯು ಕಾಮಾತುರಳಾಗಿ ಇಂದ್ರಿಯನಿಗ್ರಹವನ್ನು ಮಾಡಲು ಅಸಮರ್ಥಳಾಗಿ, ಭೋಗಕ್ಕೆ ಸಮರ್ಥ ಮತ್ತು ನಾಯಕನಲ್ಲಿರತಕ್ಕ ಗುಣಗಳಿಂದ ಪರಿಪೂರ್ಣವಾದಂಥ ಅನ್ಯ ಪುರುಷನಿಗೆ ಪತಿಯೆಂದು ಸ್ವೀಕರಿಸುವ ಸ್ತ್ರೀಗೆ ಪುನರ್ಭೂ ಎಂದೆನ್ನುವರು. ಪ್ರಥಮ ಪತಿಯು ಮರಣಹೊಂದುವುದರಿಂದ ನಷ್ಟವಾದ ಭಾರ್ಯತ್ವವು ಪುನಃ ಅವಳಲ್ಲಿ ಉತ್ಪನ್ನವಾಗುವುದರಿಂದ "ಪುನಃ ಭವತೀತಿ ಸಾ ಪುನರ್ಭೂಃ" ಎಂಬಂತೆ ಪುನರ್ಭೂ ಎಂಬ ಶಬ್ದವು ಯಥಾರ್ಥವಾಗಿ ಅವಳಿಗೆ ಅನ್ವಯಿಸುವುದು. ಭೋಗಕ್ಕೆ ಸಮರ್ಥ ಮತ್ತು ನಾಯಕನಲ್ಲಿರತಕ್ಕ ಗುಣ ಇವೆರಡೂ ಶಬ್ದಗಳನ್ನು ಗೋನರ್ಧಿಯ ಆಚಾರ್ಯರ ಮತದಂತೆ ಇಲ್ಲಿ ಸೂಚಿಸಲಾಗಿದೆ.

**ಯತಸ್ತು ಸ್ವೇಚ್ಛಯಾ ಪುನರಪಿ ನಿಷ್ಕ್ರಮಣಂ ನಿರ್ಗುಣೋಽಯಮಿತಿ ತದಾಯಂ ಕಾಂಕ್ಷತೀತಿ ಬಾಭ್ರವೀಯಾಃ**

ಪತಿಯು ನಿರ್ಗುಣವುಳ್ಳವನೆಂದು ತಿಳಿದು ಅವನನ್ನು ತ್ಯಜಿಸಿ ಬೇರೆ ಉಪಭೋಗ ಯೋಗ್ಯಪುರುಷನನ್ನು ವರಿಸಲು ಯಾವಳು ಅಪೇಕ್ಷಿಸುವಳೋ

ಅವಳಿಗೆ ಪುನರ್ಭೂನಾಯಿಕೆಯೆಂದು ಬಾಭ್ರವೀಯನು ಅಭಿಪ್ರಾಯ ಪಡುವನು.

ಸೌಖ್ಯಾರ್ಥಿನೀ ಸಾ ಕಿಲಾನ್ಯಂ ಪುನರ್ವಿಂದೇತ ।
ಗುಣೇಸು ಸೋಪಭೋಗೇಷು ಸುಖಸಾಕಲ್ಯಂ ತಸ್ಮಾತ್ತತೋ ವಿಶೇಷ
ಇತಿ ಗೋನರ್ಧಿಯಃ ॥

ವಿಷಯೋಪಭೋಗದ ಅಪೇಕ್ಷೆಯಿಂದ ಅವಳು ಬಹುತರವಾಗಿ ಹೊಸಹೊಸ ಪುರುಷರನ್ನು ದೊರಕಿಸುವಳು. ಒಬ್ಬನಿಗಿಂತ ಮತ್ತೊಬ್ಬನು ಸದ್ಗುಣವುಳ್ಳವನಿದ್ದು ಉಪಭೋಗ ಸಮರ್ಥನಿದ್ದರೆ, ಅವಳಿಗೆ ಎಲ್ಲ ತರಹದ ಸುಖದ ಪ್ರಾಪ್ತಿಯಾಗುತ್ತದೆ. ಉಪಭೋಗ ಸಮರ್ಥನಿರ್ಗುಣ ನಾಯಕನಿಗಿಂತಲೂ ಈ ಉಪಭೋಗ ಸಮರ್ಥ ಸದ್ಗುಣಗಳುಳ್ಳವನು ಶ್ರೇಷ್ಠನೆಂದು ಗೋನರ್ಧಿಯನು ಹೇಳುವನು. ಯಾವ ನಾಯಿಕೆಯು ಮೇಲಿಂದ ಮೇಲೆ ಒಬ್ಬನ ತ್ಯಾಗಮಾಡಿ ಮತ್ತೊಬ್ಬನ ಆಶ್ರಯ ಹೊಂದುವಳೋ ಅವಳು ಒಂದು ಪ್ರಕಾರದ ವೇಶ್ಯೆಯೆಂದೇ ಎಲ್ಲ ಆಚಾರ್ಯರು ಅಭಿಪ್ರಾಯ ಪಡುವರು.

ಆತ್ಮನಶ್ಚಿತ್ತಾನುಕೂಲ್ಯಾದಿತಿ ವಾತ್ಸ್ಯಾಯನಃ ॥

ಒಬ್ಬ ನಾಯಕನು ಉತ್ತಮ ಗುಣಗಳುಳ್ಳವನಿದ್ದು ಉಪಭೋಗ ಸಮರ್ಥನಿದ್ದರೂ ಅವನನ್ನು ನೋಡುವುದರಿಂದ ನಾಯಿಕೆಗೆ ಸಂತೋಷವೆನಿಸದಿದ್ದರೆ, ಅಂಥವನ ಸಹವಾಸದಲ್ಲಿ ಯಾವ ತರಹದ ಸುಖವೂ ನಾಯಿಕೆಗೆ ಲಭಿಸಲಾರದು. ನಾಯಿಕೆಯು ತನಗೆ ಪ್ರಿಯನಾದವನ್ನು ವರಿಸಿದರೆ ಆವಳಿಗೆ ಎಲ್ಲ ತರಹದ ಸುಖದ ಪ್ರಾಪ್ತಿಯಾಗುತ್ತದೆ. ಉತ್ತಮ ಗುಣಗಳುಳ್ಳವ ಮತ್ತು ಉಪಭೋಗ ಸಮರ್ಥ ನಾಯಕನಿಗಿಂತ ಈ ನಾಯಕನು ಬೇರೆ ತರಗತಿಯವನಿರುವನೆಂದು ವಾತ್ಸ್ಯಾಯನನು ಹೇಳುವನು.

ಬೇರೆಯವರನ್ನು ಲಗ್ನವಾದ ವಿಧವಾ ಪುನರ್ಭೂನಾಯಿಕೆಯು ತನ್ನ ಪತಿಯು ಕಡೆಯಿಂದ ವಿಶೇಷ ದ್ರವ್ಯವನ್ನು ಖರ್ಚುಮಾಡಿ ಮುಂದಿನ ಕಾರ್ಯಗಳನ್ನು ಮಾಡುವ ಮನಿಷೆಯನ್ನು ಇಟ್ಟುಕೊಳ್ಳಬೇಕು. ತನ್ನ ಎಲ್ಲ ಬಂಧು-ಬಳಗದವರನ್ನು ಒಂದೆಡೆಗೆ ಕೂಡಿಸಿ ಮದ್ಯಪಾನದ ಸಮಾರಂಭಮಾಡಿಸಬೇಕು. ಎಲ್ಲರೊಡಗೂಡಿ ಉದ್ಯಾನ ವಿಹಾರ ಮಾಡಬೇಕು.

ಭಕ್ತಿಯಿಂದ ಬ್ರಾಹ್ಮಣರಿಗೆ ದಾನಧರ್ಮಗಳನ್ನು ಮಾಡಬೇಕು. ಮಿತ್ರ ಜನರಿಗೆ ಸನ್ಮಾನ ಮಾಡಬೇಕು. ಸ್ವಜನರಿಗೆ ವಸ್ತ್ರಭೂಷಣಗಳನ್ನು ಕೊಡಬೇಕು. ಈ ಎಲ್ಲ ಕಾರ್ಯಗಳನ್ನು ಪೂರ್ಣಗೊಳಿಸುವ ಆರ್ಥಿಕ ಸಾಮರ್ಥ್ಯವು ನಾಯಕನಲ್ಲಿರಬೇಕು. ಒಂದು ವೇಳೆ ನಾಯಕನ ಆರ್ಥಿಕ ಸ್ಥಿತಿಯು ಇದಕ್ಕೆ ವ್ಯತಿರಿಕ್ತವಾಗಿದ್ದಲ್ಲಿ ನಾಯಿಕೆಯು ಸ್ವತಃ ತನ್ನ ದುಡ್ಡಿನಿಂದ ಈ ಎಲ್ಲ ಕಾರ್ಯಗಳನ್ನು ಮಾಡಿಸಬೇಕು. ಅದರಂತೆಯೇ ನಾಯಕನು ಕೊಟ್ಟ ವಸ್ತ್ರಾಲಂಕಾರಗಳನ್ನು ಪ್ರೇಮದಿಂದ ಧರಿಸಬೇಕು. ಅವು ಅಲ್ಪಬೆಲೆಯುವೆಂದು ಹೀಯಾಳಿಸಿ ಎಂದೂ ಒಗೆಯಬಾರದು.

ನಾಯಿಕೆಗೆ ಪತಿಯು ಸರಿಬರದಿದ್ದರೆ, ತಾನಾಗಿಯೆ ಅವಳನ್ನು ಬಿಟ್ಟು ಸ್ವೇಚ್ಛೆಯಿಂದ ಹೊರಹೊರಡುವಾಗ, ಪತಿಯು ಪ್ರೇಮದಿಂದ ಕೊಟ್ಟ ಅಲಂಕಾರಗಳೆಲ್ಲವನ್ನೂ ಅವನಿಗೆ ಮರಳಿಕೊಡಬೇಕು. ಆದರೆ ಗಂಡನು ತಾನಾಗಿ ಹೆಂಡತಿಯನ್ನು ಹೊರಗೆ ಹಾಕುವಾಗ ಅವನು ಕೊಟ್ಟ ಯಾವ ಒಡವೆಯನ್ನೂ ಅವನಿಗೆ ಕೊಡಕೂಡದು. ಮೊದಲನೆಯ ಪತಿಯನ್ನು ಬಿಟ್ಟು ಎರಡನೆಯವನ ಮನೆಯನ್ನು ಸೇರಲು ಅಪೇಕ್ಷಿಸುವ ನಾಯಿಕೆಯು ಅಲ್ಲಿ ಮನೆಯ ಒಡತಿಯಂತೆ ಪ್ರವೇಶಿಸುವಳು.

ನಾಯಕನ ಮೊದಲಿನ ಪತ್ನಿಯು ಮನೆಯಲ್ಲಿದ್ದರೆ, ಆ ಸಮಯದಲ್ಲಿ ಈ ಪುನರ್ಭೂ ನಾಯಿಕೆಯು ಯಾವ ಪ್ರಕಾರ ವರ್ತಿಸಬೇಕೆಂಬುದನ್ನು ಸೂತ್ರಕಾರರು ಮುಂದಿನಂತೆ ಹೇಳುತ್ತಾರೆ.

**ಕುಲಜಾಸು ತು ಪ್ರೀತ್ಯಾ ವರ್ತೇತ ॥**

ನಾಯಕನ ಮೊದಲಿನ ಕುಲೀನ ಧರ್ಮಪತ್ನಿಯೊಂದಿಗೆ ಈ ಪುನರ್ಭೂನಾಯಿಕೆಯು ಪ್ರೇಮದಿಂದ ವರ್ತಿಸಬೇಕು. ಸೇವಕಜನರೊಂದಿಗೆ ಸರಳತನದಿಂದ ವರ್ತಿಸಬೇಕು. ಉಳಿದವರೊಂದಿಗೆ ನಗೆಯಾಡುತ್ತ ಇರಬೇಕು. ನಾಯಕನ ಗೆಳೆಯರಿಗೆ ಯಾವಾಗಲೂ ಆದರ ತೋರಿಸಬೇಕು. ಕಲೆಯಲ್ಲಿ ತನ್ನ ಕೌಶಲ್ಯವನ್ನು ತೋರಿಸಬೇಕು. ನಾಯಕನಿಗೆ ಅಜ್ಞಾತವಿರುವ ಸಂಗತಿಗಳಲ್ಲಿ ಹೆಚ್ಚಾಗಿ ತನ್ನ ನೈಪುಣ್ಯವನ್ನು ತೋರಿಸಬೇಕು. ನಾಯಕನು ತನ್ನ ಕುಲೀನ ಪತ್ನಿಯೊಂದಿಗೆ ಕಲಹ ಮಾಡಹತ್ತಿದರೆ, ಕಲಹಮಾಡದಂತೆ ಅವನಿಗೆ ತಿಳಿಸಿ ಹೇಳಬೇಕು.

ಏಕಾಂತದಲ್ಲಿ ವಾತ್ಸ್ಯಾಯನು ಹೇಳಿದ (ಮೊದಲನೆಯ ಭಾಗದ ಪುರುಷೋಪಸೃಪ್ತಕ ಪ್ರಕರಣದಲ್ಲಿ ಹೇಳಲಾಗಿದೆ.) ೬೪ ಕಲೆಗಳ ಸಹಾಯದಿಂದ ನಾಯಕನನ್ನು ಸಂತೋಷಗೊಳಿಸಬೇಕು. ತನ್ನ ಕುಲೀನ ಸವತಿಯ ಮೇಲೆ ತಾನಾಗಿಯೇ ಉಪಕಾರ ಮಾಡುತ್ತಿರಬೇಕು. ಸವತಿಯ ಮಕ್ಕಳನ್ನು ಅಲಂಕರಿಸಬೇಕು. ಮಕ್ಕಳೊಂದಿಗೆ ಶಿಕ್ಷಕರಂತೆ ವರ್ತಿಸಬೇಕು. ಆ ಹುಡುಗರಿಗೆ ಬಹು ಆದರದಿಂದ ವಸ್ತ್ರ, ಹೂ ಮೊದಲಾದ ಸುಗಂಧೀ ದ್ರವ್ಯಗಳನ್ನು ಕೊಡಬೇಕು. ಸೇವಕರು ಮತ್ತು ಮಿತ್ರರು ಇವರಿಗೆ ಅನೇಕ ವಸ್ತುಗಳನ್ನು ಕಾಣಿಕೆಯಾಗಿ ಕೊಡಬೇಕು. ಬೇರೆ ಬೇರೆ ಉತ್ಸವಗಳನ್ನು ಮಾಡಿಸಬೇಕು. ಮಧ್ಯದ ಉತ್ಸವಗಳಲ್ಲಿ ಭಾಗವಹಿಸಬೇಕು. ಮಿತ್ರರನ್ನೊಡಗೂಡಿ ವನಭೋಜನಕ್ಕೆ ಹೋಗಬೇಕು; ದೇವಯಾತ್ರೆಗೆ ಹೋಗಬೇಕು. ಅಲ್ಲದೆ ಬೇರೆ ಬೇರೆ ತರಹದ ಆಟಪಾಟಗಳನ್ನಾಡಬೇಕು. ಅಂದರೆ ನಾಯಕನ ಪ್ರೀತಿಯು ಹೆಚ್ಚಾಗಿ ಎಲ್ಲ ಪ್ರಕಾರದ ಸುಖವು ದೊರೆಯುತ್ತದೆ.

---

## ಅಭಾಗಿನಿವೃತ್ತ ಪ್ರಕರಣ

ಈ ವರೆಗೆ ನಾಯಕನ ಬಹುಪತ್ನಿಯರ ವರ್ಣನೆಯನ್ನು ಮಾಡಲಾಯಿತು. ಅದರಲ್ಲಿಯೇ ಒಬ್ಬ ಅಭಾಗಿನಿ ನಾಯಿಕೆಯು ಪತಿಗೆ ಅಪ್ರೀಯಳಾಗಿರುವ ಸಂಭವ ಉಂಟು. ಅಂಥವಳು ಯಾವ ಪ್ರಕಾರ ವರ್ತಿಸಬೇಕೆಂಬುದನ್ನು ಸೂತ್ರಕಾರರು ಈ ಪ್ರಕರಣದಲ್ಲಿ ಸೂಚಿಸುವರು.

> **ದುರ್ಭಗಾ ತು ಸಾಪತ್ನ್ಯಪೀಡಿತಾ ಯಾ ತಾಸಾಮಧಿಕಮಿವ ಪತ್ಯಾವುಪಚರಿತಾ ಮೈತ್ರೀಯೇತ್ ॥**

ಸವತಿಯು ತೋರಿದ ಮತ್ಸರವೇ ಮತ್ತೊಬ್ಬ ಸ್ತ್ರೀಯ ದುರ್ಭಾಗ್ಯಕ್ಕೆ ಕಾರಣವಾಗಿರುತ್ತದೆ. ಅನೇಕ ಜನ ಸವತಿಯರಲ್ಲಿ ಯಾವಳು ಪತಿಸೇವೆಯನ್ನು ಮಾಡಿ ನಾಯಕನ ಪ್ರೀತ್ಯಾದರಗಳನ್ನು ಪಡೆದಿರುವಳೋ

ಅವಳ ಆಶ್ರಯವನ್ನು ಈ ಅಭಾಗಿನಿ ಸ್ತ್ರೀಯು ಪಡೆಯಬೇಕು. ಆಶ್ರಯ ಪಡೆದ ಸವತಿಯ ಸಹಾಯದಿಂದ ತೋರಿಸಲು ಅನುಕೂಲವಾಗುವಂಥ ಪತ್ರಚ್ಛೇದ್ಯಾದಿಕ ಮೊದಲಾದ ಕಲೆಗಳನ್ನು ನಾಯಕನಿಗೆ ಕೌಶಲ್ಯದಿಂದ ತೋರಿಸಬೇಕು. ದುರ್ದೈವದಿಂದ ಇಂಥ ಅಭಾಗಿನಿ ಸ್ತ್ರೀಗೆ ಪತಿಯು ತನ್ನ ರಹಸ್ಯವನ್ನು ತಿಳಿಸುವುದಿಲ್ಲ. ಅದಕ್ಕಾಗಿ ಅವಳು ತನ್ನ ಕಲಾ ಕೌಶಲ್ಯವನ್ನು ತೋರಿಸಲು ಸವತಿಯ ಸಹಾಯವನ್ನು ಪಡೆಯಬೇಕು. ಅಂದರೆ ಮತ್ತೆ ಅವಳ ಕಡೆಗೆ ನಾಯಕನ ಮನಸ್ಸು ಹೊರಳಿ ಅವಳ ದೌರ್ಭಾಗ್ಯವು ಇಲ್ಲದಂತಾಗುವ ಸಂಭವವಿದೆ. ಸವತಿಯ ಮಕ್ಕಳ ಮೈಗೆ ಎಣ್ಣೆ ತಿಕ್ಕುವುದು; ಅವರಿಗೆ ಸ್ನಾನಕ್ಕೆ ಹಾಕುವುದು, ಮೊದಲಾದ ದಾಸಿಯ ಕೆಲಸಗಳನ್ನು ದುರ್ಭಾಗ್ಯ ಸ್ತ್ರೀಯು ತಾನೇ ಸ್ವತಃ ಮಾಡಬೇಕು. ನಾಯಕನ ಮಿತ್ರರಿಗೆ ಒಪ್ಪಿಗೆಯಾಗುವಂಥ ವರ್ತನವನ್ನಿಟ್ಟು ಅವರ ಮೂಲಕವಾಗಿ ನಾಯಕನ ವಿಷಯದಲ್ಲಿದ್ದ ತನ್ನ ಪೂಜ್ಯ ಭಾವನೆಯನ್ನು ತಿಳಿಸಬೇಕು. ಹೀಗೆ ಮಾಡುವುದರಿಂದ ಅಭಾಗಿನಿಯು ಸರಳತನದ ಪಾತ್ರಿಯಾಗಬಹುದು. ಎಲ್ಲ ಸವತಿಯರಿಗಿಂತಲೂ ತಾನು ಮೊದಲಿಗೆ ಧರ್ಮಕಾರ್ಯಗಳನ್ನು ಪ್ರಾರಂಭಿಸಬೇಕು. ಅವರಂತೆಯೇ ನಾಯಕನು ಕೈಕೊಂಡ ಯಾವುದಾದರೂ ವ್ರತೋಪಚಾರಗಳನ್ನು ತಾನೂ ಅವನ್ನು ಮಾಡಬೇಕು. ಅಭಾಗಿನಿ ನಾಯಿಕೆಯು ನಾಯಕನ ನಿಂದೆಯನ್ನು ಎಂದೂ ಮಾಡಬಾರದು. ನಾಯಕನು ತನ್ನನ್ನು ಸ್ಪರ್ಶಿಸಲು ಬಂದರೆ ಅವನಿಗೆ ವಿರೋಧ ತೋರಿಸಬಾರದು. ನಾಯಕನ ಸೇವಕ ಜನರೊಂದಿಗೆ ಅನುಕೂಲತೆಯನ್ನು ತೋರಿಸಬೇಕು. ಇತರ ಸವತಿಯರು ಅಥವಾ ಸೇವಕರಿಗಿಂತ ನಾನು ಶ್ರೇಷ್ಠಳೆಂಬುದನ್ನು ತೋರಿಸಲು ಹೋಗಬಾರದು.

ಇಲ್ಲಿಯವರೆಗೆ ಅಭಾಗಿನಿ ಸ್ತ್ರೀಯ ಬಾಹ್ಯವರ್ತನವನ್ನು ಹೇಳಲಾಯಿತು. ಇನ್ನು ಅಭ್ಯಂತರ ವರ್ತನವನ್ನು ಸೂತ್ರಕಾರರು ಕೆಳಗಿನಂತೆ ಹೇಳುವರು.

ಶಯನ ಮಂದಿರದಲ್ಲಿ ನಾಯಕನು ಹೇಗೆ ವರ್ತಿಸುವನೋ ಅದಕ್ಕೆ ಅನುಕೂಲವಾಗಿ ತನ್ನ ಇಷ್ಟವಿರದಿದ್ದರೂ ವರ್ತಿಸಬೇಕು. ಅವನಿಂದ ತಪ್ಪಾದರೂ ಅವನನ್ನು ನಿಂದಿಸಬಾರದು. ಯಾವ ಸವತಿಯೊಂದಿಗೆ

ನಾಯಕನು ಕಲಹಮಾಡುವನೋ ಅವಳನ್ನು ಮೇಲಿಂದ ಮೇಲೆ ನಾಯಕನ ಮುಂದೆ ತರುವ ಪ್ರಯತ್ನಮಾಡಬೇಕು. ಇದರಿಂದ ಅವಳ ಮೇಲೆ ಅಪ್ರೀತಿಯುಂಟಾಗಿ ಅಭಾಗಿನಿಯ ಮೇಲೆ ಪ್ರೀತಿಯುಂಟಾಗಬಹುದು.

ಯಾಂ ಚ ಪ್ರಚ್ಛನ್ನಾಂ ಕಾಮಯೇತ್ತಾಮನೇನ ಸಹ ಸಂಗಮಯೇ-
ದ್ಗೋಪಯೇಚ್ಚ ॥

ನಾಯಕನು ಪರಸ್ತ್ರೀಯ ಮೇಲೆ ಗುಪ್ತರೀತಿಯಿಂದ ಪ್ರೇಮಮಾಡುತ್ತಿದ್ದರೆ, ಅವರವರ ಭೆಟ್ಟಿ-ಸಂಭಾಷಣೆ-ಸಮಾಗಮವನ್ನು ಕೂಡಿಸಿಕೊಡಬೇಕು. ನಾಯಕನ ಇಂಥ ಎಲ್ಲ ಗುಪ್ತಮರ್ಮಗಳನ್ನು ತಿಳಿದುಕೊಂಡಿರಬೇಕು. ಆದರೆ ಅವನ್ನು ಬಹಿರಂಗವಾಗಿ ವ್ಯಕ್ತಮಾಡಬಾರದು. ಹೀಗೆ ಮಾಡುವುದರಿಂದ ನಾಯಕನು ಸ್ವಾಧೀನವಾಗುವನು. ನಾಯಕನಿಗೆ ತಾನು ತಿರಸ್ಕರಿಸಿದರೂ ಇವಳ ಪಾತಿವ್ರತ್ಯವು ನಿಷ್ಕಪಟವಿದೆ ಎಂಬುದು ಖಾತ್ರಿಯಾಗಲು ಯಾವ ಪ್ರಮಾಣಗಳನ್ನು ಅಪೇಕ್ಷಿಸುವನೋ ಅವೆಲ್ಲವುಗಳನ್ನು ಈ ಅಭಾಗಿನಿ ನಾಯಿಕೆಯು ಮಾಡಬೇಕು. ಸ್ತ್ರೀಯಲ್ಲಿಯ ಆಲಸ್ಯ ಮತ್ತು ದುಷ್ಟಸ್ವಭಾವ ಇವೇ ಮುಖ್ಯವಾಗಿ ದೌರ್ಭಾಗ್ಯದ ಕಾರಣಗಳಿರುತ್ತವೆ. ಕಾರಣ ಅಭಾಗಿನಿ ನಾಯಿಕೆಯು ಇವು ಇಲ್ಲದಂತೆ ಮೊದಲಿಗೆ ಪ್ರಯತ್ನಿಸಬೇಕು. ಅಂದರೆ ಒಂದಿಲ್ಲೊಂದು ದಿನ ಪತಿಯ ಪ್ರೇಮಾದರಗಳನ್ನು ಖಂಡಿತವಾಗಿ ದೊರಕಿಸಿ ಸುಖಿಯಾಗುವಳು.

---

## ಅಂತಃಪುರ ಪ್ರಕರಣ

ಭಾರ್ಯಾಧಿಕಾರ ಎಂಬ ಶಬ್ದದ ಭಾರ್ಯಾಯಾಃ+ಅಧಿಕಾರಃ ಎಂಬ ಸಂಧಿಯನ್ನು ಮಾಡುವಂತೆ, ಭಾರ್ಯಾಯಾಂ+ಅಧಿಕಾರಃ ಎಂದು ಸಪ್ತಮಿ ವಿಭಕ್ತಿಯ ಸಮಾಸವನ್ನೂ ಮಾಡಲು ಬರುತ್ತದೆ. ಭಾರ್ಯೆಯ ಅಧಿ

ಕಾರವು ಹೇಗೆ ನಾಯಕನ ಮೇಲೆ ನಡೆಯುತ್ತದೆಯೋ ಹಾಗೆಯೇ ನಾಯಕನ ಅಧಿಕಾರವೂ ಭಾರ್ಯೆಯ ಮೇಲೆ ನಡೆಯಬೇಕು. ಒಂದು ವೇಳೆ ಹಾಗೆ ಆಗದಿದ್ದರೆ ನಾಯಿಕೆಯು ನಾಯಕನ ವಶಳಾಗಿಯೂ ಆತನ ಅನುಕೂಲತೆಯಂತೆ ನಡೆಯಲಾರಳು. ನಾಯಕರಲ್ಲಿ ರಾಜ ಮತ್ತು ಜನಸಾಮಾನ್ಯ ಎಂದು ಎರಡು ಸೂಕ್ಷ್ಮ ಭೇದಗಳಿವೆ. ಅದರಲ್ಲಿ ರಾಜ ಈ ನಾಯಕನಿಗೆ ಉದ್ದೇಶಿಸಿಯೇ ಅವನ ಅಂತಃಪುರದಲ್ಲಿಯ ಎಲ್ಲ ವೃತಾಂತವನ್ನು ಅಂತಃಪುರ ಪ್ರಕರಣದಲ್ಲಿ ಸೂತ್ರಕಾರರು ಹೇಳಿರುವರು.

**ಅಂತಃಪುರಾಣಾಂ ಚ ವೃತ್ತಮೇತ್ವೈತೇವ ಪ್ರಕಾರಣೇಷು ಲಕ್ಷಯೇತ್॥**

ರಾಜನ ಅಂತಃಪುರದಲ್ಲಿ ಏಕಚಾರಿಣಿ, ಜೇಷ್ಠಾ, ಕನಿಷ್ಠಾ ಮತ್ತು ಪುನರ್ಭೂ ಮೊದಲಾದ ನಾಯಿಕೆಯರು ಇರುವರು. ಅವರ ವರ್ತನದ ಸಾದಾರಣ ವರ್ಣನೆಯು ಈ ಹಿಂದೆಯೇ ಮಾಡಲಾಗಿದೆ. ಆದರೆ ಅಂತಃಪುರದವರ ವಿಶೇಷ ವರ್ತನವಿರುವುದರಿಂದ ಮತ್ತು ಅದು ರಾಜ ನಾಯಕನ ವರ್ತನದಂತೆಯೇ ತಮ್ಮ ವರ್ತನವೆಂಬುದನ್ನು ಇಲ್ಲಿ ತಿಳಿಯಬೇಕು.

ಅಂತಃಪುರದ ಆಂತರರಕ್ಷಣೆಗಾಗಿ ರಾಜರು ಒಬ್ಬ ವೃದ್ಧ ಸ್ತ್ರೀಯನ್ನು ನೇಮಿಸಿರುತ್ತಾರೆ. ಆ ವೃದ್ಧಳಿಗೆ ಕಂಚುಕಿ ಎಂದೆನ್ನುವರು. ಅಂತಃಪುರದ ಸ್ತ್ರೀಯರು ಪ್ರೇಮದಿಂದ ಕಳುಹಿಸಿದ ಮಾಲ್ಯ, ಅನುಲೇಪನ ಮತ್ತು ವಸ್ತ್ರ ಮೊದಲಾದವುಗಳನ್ನು ರಾಣಿಯರು ಕಳುಹಿಸಿದ್ದೆಂದು ತಿಳಿಸಿ ಕಂಚುಕಿಯು ಅವನ್ನು ರಾಜನಿಗೆ ಅರ್ಪಿಸಬೇಕು. ರಾಜನು ಆ ಪದಾರ್ಥಗಳನ್ನು ಸ್ವೀಕರಿಸಿ ಕಂಚುಕಿ ಮೊದಲಾದ ವಸ್ತ್ರಾಭರಣಗಳನ್ನು ತಂದ ಸೇವಕರಿಗೆ ತಾನು ಮೈಮೇಲೆ ಧರಿಸಿದ ಅಲಂಕಾರ, ವಸ್ತ್ರ ಮೊದಲಾದ ಯಾವುದೇ ವಸ್ತುವನ್ನು ಬಹುಮಾನವಾಗಿ ಕೊಡಬೇಕು.

**ಅಲಂಕೃತಶ್ಚ ಸ್ವಲಂಕೃತಾನಿ ಚಪರಾಂಹೆ ಸರ್ವಾಣ್ಯಂತಃ ಪುರಾಣ್ಯೈಕಧ್ಯೇನ ಪಶ್ಯೇತ್ ॥**

ಅಂತಃಪುರದಲ್ಲಿಯ ಸ್ತ್ರೀಯರ ಭೆಟ್ಟಿಯನ್ನು ರಾಜನು ಬೇರೆ ಬೇರೆಯಾಗಿ ತೆಗೆದುಕೊಳ್ಳದೆ, ಸಾಮೂಹಿಕವಾಗಿ ತೆಗೆದುಕೊಳ್ಳಬೇಕು. ಇಳಿಹೊತ್ತಿನಲ್ಲಿ ರಾಜನು ಅಲಂಕಾರಗಳನ್ನು ಧರಿಸಿ, ಅಂತಃಪುರದಲ್ಲಿ ಸ್ತ್ರೀಯು

ರನ್ನೆಲ್ಲ ಒಂದೆಡೆಗೆ ಭೆಟ್ಟಿಯಾಗಬೇಕು. ಅಂದರೆ ರಾಜನು ಎಲ್ಲ ಸ್ತ್ರೀಯರನ್ನು ಸಮಾನತೆಯಿಂದ ನಡೆಸಿಕೊಳ್ಳುವನೆಂದು ಅವನ ಪ್ರಸಿದ್ಧಿಯಾಗುವುದು. ಆಯಾ ಸಂದರ್ಭಕ್ಕೆ ಯೋಗ್ಯವಾಗುವಂತೆ ಮತ್ತು ಕುಲೀನತೆಗೂ ವಯಸ್ಸಿಗೂ ಶೋಭಿಸುವಂತೆ ಆಯಾ ರಾಣಿಯ ಯೋಗ್ಯತೆಯಂತೆ ಆಸನ ಕೊಡಬೇಕು. ಮತ್ತು ಅವರ ಜೊತೆಗೆ ವಿನೋದದಿಂದ ಹರಟೆಹೊಡೆಯುತ್ತ, ಅವರ ಕ್ಷೇಮಸಮಾಚಾರವನ್ನು ತಿಳಿದುಕೊಳ್ಳಬೇಕು. ರಾಜನು ಮೇಲೆ ಹೇಳಿದ ಈ ಎಲ್ಲವನ್ನು ಕೇವಲ ತಾನು ವಿವಾಹಮಾಡಿಕೊಂಡ ಸ್ತ್ರೀಯರೊಂದಿಗೆ ಮಾಡಬೇಕು. ವಿವಾಹಿತ ಸ್ತ್ರೀಯರಿಗೆ ಸನ್ಮಾನ ಮಾಡಿದ ನಂತರ ಪುನರ್ಭೂ ಸ್ತ್ರೀಯರಿಗೆ ಅವರವರ ಯೋಗ್ಯತೆಯ ಮೇರೆಗೆ ಸನ್ಮಾನ ಮಾಡಬೇಕು.

**ತತೋ ವೇಶ್ಯಾ ಅಭ್ಯಂತರಿಕಾ ನಾಟಕೀಯಶ್ಚ ।**
**ತಾಸಾಂ ಯಥೋಕ್ತಕಕ್ಷಾಣಿ ಸ್ಥಾನಾನಿ ॥**

ಪುನರ್ಭೂ ಸ್ತ್ರೀಯರಿಗೆ ಭೆಟ್ಟಿಯಾದ ನಂತರ ಜನಾನಖಾನೆಯಲ್ಲಿಟ್ಟ ವೇಶ್ಯೆಯರಿಗೂ ಅನಂತರ ನಾಟಕ ಪ್ರಯೋಗಕ್ಕೆಂದು ಕಾಯ್ದಿಟ್ಟ ಸ್ತ್ರೀಯರಿಗೂ ಅರಸನು ಭೆಟ್ಟಿಯನ್ನು ಕೊಡಬೇಕು. ರಾಜಭವನದ ಮಧ್ಯದಲ್ಲಿಯ ಆವಾರದಲ್ಲಿ ವಿವಾಹಿಕ ರಾಣಿಯರಿಗೆ ಇರಲು ಸ್ಥಳವನ್ನು ಕೊಡಬೇಕು. ಅವರ ಹೊರಗಿನ ಭಾಗದಲ್ಲಿ ಪುನರ್ಭೂ ಸ್ತ್ರೀಯರು ಇರುವ ವ್ಯವಸ್ಥೆ ಮಾಡಬೇಕು. ಅವರ ಕೊನೆಯ ಭಾಗದಲ್ಲಿ ವೇಶ್ಯೆಯರನ್ನಿಡಬೇಕು. ಎಲ್ಲಕ್ಕೂ ಹೊರಗಿನ ಸ್ಥಳದಲ್ಲಿ ನಾಟಕಗಳಲ್ಲಿ ಕೆಲಸ ಮಾಡುವ ಸ್ತ್ರೀಯರನ್ನು ಇಟ್ಟರೆ, ಅವರವರಿಗೆ ಯೋಗ್ಯಸ್ಥಳವಾಗುವುದು. ಎಂದು ಗಣಿಕಪುತ್ರನು ಹೇಳುವನು.

ರಾಜನು ಇಂದು ಯಾರಹತ್ತಿರ ಇರುವ ಸರತಿ ಇದೆಯೋ ಅವಳು, ರಾಜನು ಯಾರ ಹತ್ತಿರ ಇರುವ ಸರತಿಯು ಪೂರ್ಣವಾಗಿದೆಯೋ ಅಂಥವಳು ಮತ್ತು ಯಾವ ಅರಸಿಗೆ ರಜೋದರ್ಶವಾಗಿದೆಯೋ ಅಂಥ ಅರಸಿಯರು ತಮ್ಮ ತಮ್ಮ ದಾಸಿಯ ಮೂಲಕವಾಗಿ ಗಂಧ ಪುಷ್ಪ ಮೊದಲಾದ ಸುಗಂಧಿ ದ್ರವ್ಯಗಳನ್ನು ವಾಸಕಪಾಲಿಕೆಯ ಮುಖಾಂತರವಾಗಿ ಅರಸನು ಮಧ್ಯಾಹ್ನದ ನಿದ್ರೆಯನ್ನು ಮುಗಿಸಿ ಎದ್ದ ನಂತರ ಅವನ ಹತ್ತಿರ ಕಳುಹಿಸಿ

ಕೊಡಬೇಕು. ಇವೆಲ್ಲವುಗಳನ್ನು ಅರ್ಪಿಸುವಾಗ ವಾಸಕಪಾಲಿಕೆಯು ಇಂದು ಇಂಥವಳಲ್ಲಿಗೆ ಹೋಗಬೇಕು, ಇಂದು ಇಂಥವಳ ರಜೋದರ್ಶನ ವಾಗಿದೆ, ಎಂಬ ಸಂಗತಿಯನ್ನು ಅರಸನಿಗೆ ತಿಳಿಸಬೇಕು.

ತತ್ರ ರಾಜಾಯಜ್ ಗೃಹ್ಣೀಯಾತ್ ಸ್ಯಾ ವಾಸಕವಾಜ್ಞಾಪಯೇತ್ ।

ಯಾವ ಸ್ತ್ರೀಯು ಕಳುಹಿಸಿದ ಪದಾರ್ಥಗಳನ್ನು ಅರಸನು ಸ್ವೀಕರಿಸುವನೋ ಆ ಸ್ತ್ರೀಗೆ 'ಇಂದು ನಿನ್ನಲ್ಲಿಗೆ ಅರಸನು ಇರಲು ಬರುವನು. ನೀನು ಅದರ ವ್ಯವಸ್ಥೆಯನ್ನು ಮಾಡು' ಎಂದು ವಾಸಕಪಾಲಿಕೆಯು ತಿಳಿಸಬೇಕು.

ಉತ್ಸವ ಪ್ರಸಂಗಗಳಲ್ಲಿ ಎಲ್ಲ ಸ್ತ್ರೀಯರಿಗೆ ಕುಲೀನತೆ ಮತ್ತು ವಯಸ್ಸಿಗೆ ಯೋಗ್ಯವಾಗುವಂತೆ ಸನ್ಮಾನಮಾಡಬೇಕು. ಅವರ ಜೊತೆಗೆ ಮಧ್ಯಪಾನ ಮಾಡಬೇಕು. ಗಾಯನವಾದನ ಪ್ರಸಂಗಗಳಲ್ಲಿಯೂ ಇದ ರಂತೆಯೇ ಮಾಡಬೇಕು.

ಜನರು ಗಾಯನ-ವಾದನಗಳಲ್ಲಿ ಮಗ್ನರಾದ ಸಮಯದಲ್ಲಿ ಗಾಯಕರ ಅಥವಾ ವಾದನಕಾರರ ವೇಷ ಧರಿಸಿ ನಾಗರಿಕರು ಅಂತಃಪುರದಲ್ಲಿ ಪ್ರವೇಶಿಸುವ ಸಂಭವವಿರುತ್ತದೆ. ಅದಕ್ಕಾಗಿ ಯಾವುದೇ ಪರಕೀಯ ಮನುಷ್ಯನನ್ನು ಅಂತಃಪುರದಲ್ಲಿ ಬಿಡುವ ಮೊದಲಿಗೆ ಅವನ ಪರೀಕ್ಷೆಯನ್ನು ತೆಗೆದುಕೊಳ್ಳಬೇಕು. ಪರೀಕ್ಷೆಯಲ್ಲಿ ವಿಶ್ವಾಸವುಳ್ಳವನೆಂದು ತಿಳಿದುಬಂದ ಜನರು ಅಂತಃಪುರದಲ್ಲಿ ಬಂದರೆ ಗೊಂದಲವಾಗಲಾರದು ಗಾಯನವಾದನ ದಂಥ ಆನಂದದ ಸಮಯದಲ್ಲಿ ಪರೀಕ್ಷೆಮಾಡುವಾಗ ಅವರನ್ನು ನೋಯಿಸ ದಂತೆ ಎಚ್ಚರಿಕೆ ವಹಿಸಬೇಕು.

ಈ ಪ್ರಕಾರ ಅಂತಃಪುರ ಪ್ರಕರಣವು ಸಮಾಪ್ತವಾಗುತ್ತದೆ.

ಅರಸನಿಗೆ ಅನೇಕ ಜನರು ರಾಣಿಯರಿರುವಂತೆ ಪ್ರಜೆಗಳಲ್ಲಿಯೂ ಅನೇಕರಿಗೆ ಬಹು ಪತ್ನಿಯರಿರುವ ಸಂಭವವುಂಟು; ಅಂಥವರು ಯಾವ ಪ್ರಕಾರ ತಮ್ಮ ಸ್ತ್ರೀಯರೊಂದಿಗೆ ಆಚರಿಸಬೇಕೆಂಬುದನ್ನು ಸೂತ್ರಕಾರರು ಮುಂದಿನಂತೆ ಹೇಳುತ್ತಾರೆ. ಸಾಮಾನ್ಯವಾಗಿ ಈ ವಿಷಯದಲ್ಲಿ ಕೆಳಗಿನ ಶ್ಲೋಕಗಳು ಪ್ರಚಾರದಲ್ಲಿವೆ.

**ಪುರುಷಸ್ತು ಬಹುಂದಾರಾಂಸಮಾಹೃತ್ಯ ಸಮೋ ಭವೇತ್ ।**
**ನ ಚಾವಜ್ಞಾಂ ಚರೇತ್ತಾಸು ವ್ಯಲೀಕಾನ್ನ ಸಹೇತ ಚ ॥**

ನಾಯಕನಿಗೆ ಅನೇಕ ಜನ ಪತ್ನಿಯರಿದ್ದರೆ, ಎಲ್ಲರಿಗೂ ಸರಿಸಮಾನವಾಗಿರಿಸಬೇಕು. ಒಬ್ಬಳ ಮೇಲೆಯೇ ವಿಶೇಷವಾಗಿ ಪ್ರೇಮಮಾಡಬಾರದು. ಅದರಂತೆಯೇ ಒಬ್ಬ ಪತ್ನಿಯು ಕುರೂಪಿಯಾಗಿದ್ದರೆ, ಅವಳ ಅಪಮಾನವನ್ನು ಮಾಡಬಾರದು. ಒಬ್ಬಳು ಏನಾದರೂ ಅಪರಾಧ ಮಾಡಿದ್ದರೆ ಅವಳನ್ನೆಂದೂ ಕ್ಷಮಿಸಬಾರದು. ಯಾಕಂದರೆ ಅಪರಾಧವನ್ನು ಕ್ಷಮಿಸಿದರೆ ಅದೇ ಸ್ತ್ರೀಯ ಕಡೆಯಿಂದ ಅಥವಾ ಇತರ ಸ್ತ್ರೀಯರ ಕಡೆಯಿಂದಾಗಲಿ ಪುನಃ ಅಪರಾಧವಾಗಬಹುದು. ಅದಕ್ಕಾಗಿ ಅಪರಾಧಕ್ಕೆ ಯೋಗ್ಯ ಶಿಕ್ಷೆಯನ್ನು ವಿಧಿಸಬೇಕು.

**ಏಕಸ್ಯಾಂ ಯಾ ರತಿಕ್ರೀಡಾ ವೈಕೃತಂ ವಾ ಶರೀರಜಮ್ ।**
**ವಿಸ್ರಂಭಾದ್ವಾಪ್ಯುಪಾಲಂಭಸ್ತಮನ್ಯಾಸು ನ ಕೀರ್ತಯೇತ್ ॥**

ಚಿತ್ರರತದಂಥ ಸುರತ ಪ್ರಸಂಗದಲ್ಲಿ ಅಥವಾ ಬೇರೆಯಾವುದಾದರೊಂದು ಸುರತ ಸಮಯದಲ್ಲಿ ಒಬ್ಬ ಸ್ತ್ರೀಯು ತೋರಿದ ಸಮಾಗಮ ಚಾತುರ್ಯ ಅಥವಾ ಅಚಾತುರ್ಯವನ್ನು ಎರಡನೆಯ ಸ್ತ್ರೀಯು ಮುಂದೆ ಎಂದೂ ಹೇಳಬಾರದು. ಅದರಂತೆ ಒಬ್ಬ ಸ್ತ್ರೀಯ ಗುಹ್ಯೇಂದ್ರಿಯದ ಮೇಲಿದ್ದ ಕಲೆ ಮೊದಲಾದ ದೋಷಗಳನ್ನೂ ಅವಳು ನಾಯಕನಿಗೆ ಏಕಾಂತದಲ್ಲಿ ಹೇಳಿದ ಮಾತುಗಳನ್ನು ನಾಯಕನು ಎರಡನೆಯ ಸ್ತ್ರೀಯ ಮುಂದೆ ಹೇಳಬಾರದು. ಇವೆಲ್ಲವುಗಳನ್ನು ಹೇಳುವುದರಿಂದ ನಾಯಿಕೆಯ ಮನಸ್ಸು ನಾಯಕನ ವಿಷಯದಲ್ಲಿ ಸಂಶಯ ಪಡುವಂಥಾದ್ದಾಗುತ್ತದೆ.

ಅನೇಕ ಜನ ಪತ್ನಿಯರಲ್ಲಿ ಒಬ್ಬಳಿಂದ ಏನಾದರೂ ತಪ್ಪಾಗಿದ್ದರೆ, ಅವಳ ವಿಷಯದಲ್ಲಿ ಉಳಿದವರಿಗೆ ಮಾತನಾಡಲು ಅವಕಾಶ ಕೊಡಬಾರದು. ಅವರು ಅಕಾರಣವಾಗಿ ದೂಷಣವನ್ನು ಕೊಡದಂತೆ ಮುಂಜಾಗ್ರತೆ ಪಡಿಸಬೇಕು.

ಕ್ಷಣಕ್ಷಣಕ್ಕೆ ನಾಚುವ ಸ್ತ್ರೀಯನ್ನು ಏಕಾಂತದಲ್ಲಿ ಕೂಡ್ರಿಸಿ, ವಿಶ್ವಾಸಪೂರ್ವಕವಾಗಿ ಮಾತನಾಡಿ ಅವಳನ್ನು ಸಂತೋಷಗೊಳಿಸಬೇಕು.

ಸವತಿಯರಲ್ಲಿ ತನಗೆ ಮರ್ಯಾದೆ ದೊರಿಯಬೇಕೆಂದು ಬಯಸುವವಳನ್ನು ಬಹಿರಂಗವಾಗಿ ಸನ್ಮಾನಮಾಡಬೇಕು. ಇದಾವುದನ್ನೂ ಅಪೇಕ್ಷಿಸದೆ ಪತಿ ಸೇವೆ ಮಾಡುತ್ತಿರುವ ಮಾನಿನಿಯನ್ನು ವಿಶೇಷ ಆದರದಿಂದ ಸನ್ಮಾನ ಮಾಡಿ ಸಂತೋಷಗೊಳಿಸಬೇಕು. ಯಾವ ಸ್ತ್ರೀಗೆ ವನವಿಹಾರವು ಪ್ರಿಯ ವೆನಿಸುವದೋ ಅಂಥವಳನ್ನು ವನವಿಹಾರಕ್ಕೆ ಕರೆದೊಯ್ಯಬೇಕು. ವಿಲಾ ಸಿನಿ ಸ್ತ್ರೀಯರಿಗೆ ಬೇರೆ ಬೇರೆ ಸುಖಭೋಗದ ವಸ್ತುಗಳನ್ನು ಕೊಟ್ಟು ಸಂತೋಷಗೊಳಿಸಬೇಕು. ತನ್ನ ಬಂಧುಬಳಗದವರ ಸನ್ಮಾನವಾಗಬೇಕೆಂದು ಅಪೇಕ್ಷಿಸುವವಳ ಬಂಧುಬಳಗದವರನ್ನು ಸನ್ಮಾನಮಾಡಿ, ಅವಳನ್ನು ಸಮಾಧಾನಗೊಳಿಸಬೇಕು. ಮತ್ತೊಬ್ಬಳಿಗೆ ಯಾವುದಾದರೊಂದು ಗುಪ್ತ ಸಂಗತಿಯನ್ನು ಹೇಳಿ ಸಂತೋಷಗೊಳಿಸಬೇಕು. ಮಗದೊಬ್ಬಳಿಗೆ ಪ್ರೇಮ ದಿಂದ ಅನುಕೂಲಗೊಳಿಸಬೇಕು.

> ಯುವತಿಶ್ಚ ಜಿತಕ್ರೋಧಾ ಯಥಾಶಾಸ್ತ್ರಪ್ರವರ್ತಿನೀ ।
> ಕರೋತಿ ವಶ್ಯಂ ಭರ್ತಾರಂ ಸಪತ್ನೀಶ್ಚಾಧಿತಿಷ್ಠತಿ ॥

ಯಾವ ಸ್ತ್ರೀಯು ಮೇಲೆ ಹೇಳಿದ ಏಕಚಾರಿಣಿ ಮೊದಲಾದ (ತನಗೆ ಅನ್ವಯಿಸುವ) ರಿಗೆ ಸೂಚಿಸಿದಂತೆ ಶಾಸ್ತ್ರಾನುಸಾರ ವರ್ತನವನ್ನಿಟ್ಟರೆ, ಪತಿಯನ್ನು ವಶಪಡಿಸಿಕೊಂಡು ಸ್ವಜಾತಿಯವರಲ್ಲಿ ಸನ್ಮಾನವನ್ನು ದೊರ ಕಿಸುವಳು.

ಇಲ್ಲಿಗೆ ಶ್ರೀ ವಾತ್ಸ್ಯಾಯನ ಮುನಿಯು ಬರೆದ ಸಂಸ್ಕೃತ ಕಾಮಸೂತ್ರ ದಲ್ಲಿಯ ಭಾರ್ಯಾಧಿಕಾರಿಕವೆಂಬ ನಾಲ್ಕನೆಯ ಅಧಿಕರಣ ಸಮಾಪ್ತ.



# ಅಧಿಕರಣ : ೫

## ಪರಸ್ತ್ರೀಗಮನದ ವಿಮರ್ಶೆ

ಮೊದಲನೇ ಅಧಿಕರಣದ ಮೊದಲನೇ ಅಧ್ಯಾಯದಲ್ಲಿ "ಕಾಮಶಾಸ್ತ್ರದ ಪರಂಪರೆ"ಯಲ್ಲಿ ಟೀಕೆ-ಟಿಪ್ಪಣಿಗಳ ಸಹಿತವಾಗಿ ಈ ಸಂಗತಿಯ ಕೂಲಂಕುಷ ಚರ್ಚೆಯನ್ನು ಮಾಡಲಾಗಿದೆಯಲ್ಲದೆ ಪ್ರಾಚೀನ ಭಾರತವು ಪರಸ್ತ್ರೀಗಮನಕ್ಕೆ ವಿರೋಧಿಯಿತ್ತೆಂದೂ ಪ್ರತಿಪಾದಿಸಲಾಗಿದೆ. ಆದರೂ ಕೂಡ ಪರಧರ್ಮೀಯರ ಸಂಪರ್ಕದಿಂದ ಭಾರತವು ಎರಡು ಸಾವಿರ ವರ್ಷಗಳ ಪೂರ್ವದಲ್ಲಿ ಇದನ್ನು ಕಲಿಯಿತಲ್ಲದೆ, ಇದು ಅದರ ಸಭ್ಯತೆಯಲ್ಲಿ ಎಳ್ಳಷ್ಟೂ ಸ್ವತಂತ್ರವಾಗಿ ಇದ್ದಿಲ್ಲ. ಪ್ರಾಚೀನ ಪುರುಷರು ಪರಸ್ತ್ರೀಯರನ್ನು ವಿಷದಂತೆ ಭಾವಿಸುತ್ತಿದ್ದರೆಂದು ವೇದದಿಂದಲೂ ತಿಳಿದು ಬರುತ್ತದೆ. ಆದರೆ, ಕಾಮಾತುರಳಾದ ಪರಸ್ತ್ರೀಯು ಸ್ವತಃ ತಾನಾಗಿಯೇ ಪರಪುರುಷನಲ್ಲಿ ಬಂದು ಹಾಸಿಗೆಯತನಕ ಆತ್ಮಸಂತೋಷದಿಂದ ಹೋದಾಗ ಮಾತ್ರ ಉಪವಾಸವಿದ್ದವರಿಗೆ ಅನ್ನ ಹಾಕುತ್ತೇನೆಂಬುವ ಭಾವನೆಯಿಂದ ಪರಸ್ತ್ರೀಗಮನವನ್ನು ಮಾಡುತ್ತಿದ್ದರೇ ಹೊರತು ಅನ್ಯಥಾ ಅಲ್ಲ. ಹಲಕೆಲವು ಸ್ತ್ರೀಯರ ಜತೆಗೆ ಇಂತಹ ಪ್ರಸಂಗಗಳಲ್ಲಿಯೂ ಕೂಡ ವಿಚಾರವಂತರಾದ ಪುರುಷರು ಗಮನವನ್ನು ಮಾಡುತ್ತಿರಲಿಲ್ಲ. ಇದಕ್ಕಾಗಿಯೇ ವೀರಾಧಿವೀರನಾದ ಅರ್ಜುನನು ಹಾಸಿಗೆತನಕ ಬಂದ ಊರ್ವಸಿಯನ್ನು ಚಂದ್ರವಂಶದ ಜನನಿಯೆಂದು ತ್ಯಾಗಮಾಡಿದನು. ಅದರಂತೆಯೇ ಯಾವ ಸ್ತ್ರೀಯರ ವಿಷಯಕ್ಕೆ ಧರ್ಮಶಾಸ್ತ್ರಾನುಸಾರವಾಗಿ ತಾಯಿ, ಅಕ್ಕ ತಂಗಿ ಅಥವಾ ಮಗಳ ಸಂಬಂಧವಾಗುತ್ತದೆಯೋ ಅಂಥ ಸ್ತ್ರೀಯರನ್ನು ಇಂತಹ ಪ್ರಸಂಗದಲ್ಲಿಯೂ ಕೂಡ ತ್ಯಾಗಮಾಡಲಾಗುತ್ತಿತ್ತು. ಧರ್ಮವಂತನಾದ ಯಮಧರ್ಮನನ್ನು ಅವನ ತಂಗಿಯು ಲೋಕೋಪಕಾರಕ್ಕಾಗಿ ಅವನ ಕರ್ತವ್ಯವನ್ನು ಪರಾವೃತ್ತಗೊಳಿಸುವದಕ್ಕಾಗಿ ಕಾಮಾತುರ ಸ್ವರದಿಂದ ಅವನನ್ನು "ಈ ಸ್ಥಳವು ಅತ್ಯಂತ ಏಕಾಂತದ್ದಾಗಿದೆ, ಇಲ್ಲಿ ಯಾರೂ ಬರುವಂತೆ ಇಲ್ಲ. ನಾನು ಯೋಗ್ಯಳಿದ್ದೇನಲ್ಲದೆ, ನನ್ನ ಕೂಡ

ಸಹವಾಸಮಾಡಿ ನೀನು ನಿನ್ನ ಮಗನನ್ನು ಪ್ರಾಪ್ತಮಾಡಿಕೊಳ್ಳಬೇಕೆಂದು ನಾನು ಬಯಸುತ್ತೇನೆ" ಎಂದು ಪ್ರಾರ್ಥಿಸಿದಳು. ಇದನ್ನು ಕೇಳಿ ಯಮದೇವನು ಉತ್ತರಕೊಟ್ಟದ್ದೇನೆಂದರೆ— "ನೀನು ನನ್ನ ತಂಗಿಯಿರುತ್ತೀ, ಆದ್ದರಿಂದ ನಾನು ನಿನ್ನ ಕೂಡ ಯಾವದೇ ರೀತಿಯಿಂದ ಏನನ್ನೂ ಮಾಡಲು ಇಚ್ಛಿಸುವದಿಲ್ಲ. ನೀನು 'ಯಾವ ಯಾವ ಚೇಷ್ಟೆಗಳನ್ನು ಮಾಡುತ್ತಿರುವೆಯೋ ಅವು ತಂಗಿಯರು ಮಾಡುವಂಥವಲ್ಲ. ಇದಾದರೂ **"ಸಲಕ್ಷ್ಮಾ ಯದ್ ವಿಷುರೂಪಾ ಭವತಿ"** ಬೇರೆ ಜನರು ಮಾಡತಕ್ಕಂಥಗಳಿವೆಯೇ ಹೊರತು ತಂಗಿ-ತಾಯಿ ಮುಂತಾದವರು ಮಾಡುವಂಥದಲ್ಲ. ಯಾವ ಗಂಡಸು ಇಂತಹ ಪಾಪಕರ್ಮಗಳನ್ನು ಮಾಡುತ್ತಾನೆಯೋ ಅಂತಹ ಬಂಧುವೂ ಕೂಡ ಇದನ್ನು ಮಾಡಲಾರ ಆದರೆ **"ಪಾಪಮಾಹುರ್ಯಃ ಸ್ವಸಾರಂ ನಿಗಚ್ಛಾತ್"** (ಇಂತಹ ಪಾಪಗಳನ್ನು ಮಾಡುವವನು ಸರಾತಳಕ್ಕೆ ಹೋಗುತ್ತಾನೆ). ಎಂದು ವಜ್ರಪಾಪಿ ಹೇಳುವಂತೆ ತಾಯಿ-ತಂಗಿಯರ ಜತೆಗೆ ಸಂಗಮಾಡುವವನ ಪರಿಸ್ಥಿತಿಯಾಗುತ್ತದೆ." ಇದರಿಂದ ನಿಶ್ಚಿತವಾಗುವದೇನೆಂದರೆ, ತಾಯಿ-ತಂಗಿ ಮುಂತಾದ ಯಾರ ಕೂಡಾದರೂ ಇಂತಹ ವ್ಯವಹಾರವಾಗುವದಿದ್ದರೆ, ಆ ದೇವಿಯರು ಎಷ್ಟೊಂದು ನಾಟಕೆಗೀಡುಮಾಡಿದರೂ ಅಡ್ಡಿಯಿಲ್ಲ, ಆದರೆ ಆತ್ಮವನ್ನು ಸಂಯಮದಲ್ಲಿಡಬೇಕು. ಇದರ ಹೊರತು ಯಾವ ಸ್ತ್ರೀಯರ ಗಮನದಲ್ಲಿ ಮಹಾಪಾಪವಿಲ್ಲವೋ ಈ ಮಾತನ್ನು ತೋರಿಸಿದ ಕಾಮಸೂತ್ರಕಾರರು ಮೇಲಿನ ಕಾರಣಗಳು ಉಪಸ್ಥಿತವಾದರೂ ಕೂಡ ತಮ್ಮ ಸ್ವಾರ್ಥಸಿದ್ಧಿಗಾಗಿ ಸ್ವಾರ್ಥಗಳು ಇರದಂತೆ ಮಾಡುತ್ತಾರಾದರೂ ಅವರ ಕರ್ಮಗಳು ಅಖಂಡವಾಗಿಯೂ ನಿಷ್ಪಾಪಿಯಿದ್ದಾನೆಂದು ಹೇಳಲು ಬರುವದಿಲ್ಲವೆಂದೂ ಅನ್ನುತ್ತಾರೆ. ಇಲ್ಲಿ ಸೂತ್ರಕಾರರು ಶರೀರ ರಕ್ಷಣೆಗಾಗಿ ಅಂತರದಲ್ಲಿ ಪರಸ್ತ್ರೀಗಮನವನ್ನು ಧರ್ಮಶಾಸ್ತ್ರವು ಅವಕಾಶಕೊಡದಿದ್ದರೂ ಕೂಡ, ಮಾಡಲು ಸೂಚನೆ ಮಾಡುತ್ತಾರೆ ಆದರೆ ಕೋಕನು ಈ ಪ್ರಸಂಗದಲ್ಲಿಯೂ ಕೂಡ ಅದನ್ನು ಪಾಪಕಾರಿಯೆಂದೇ ಅನ್ನುತ್ತಾನೆ. ಆದರೆ, **"ನ ಶರೀರಂ ಪುನಃ ಪುನಃ"** ಎಂಬ ಸಿದ್ಧಾಂತಕ್ಕನುಸರಿಸಿ ಇದರಲ್ಲಿ ಲೋಪವನ್ನೂ ಹೇಳುತ್ತಾರೆ. ಅಂದಮೇಲೆ ಶರೀರ ರಕ್ಷಣಕ್ಕಾಗಿಯಾದರೂ ವಾತ್ಸ್ಯಾಯನನು ಈ ಪಾಪಕರ್ಮವನ್ನು ಮಾಡಬೇಕೆಂದು ಏಕೆ ಹೇಳುತ್ತಾನೆ? ಎಂಬುವ ಶಂಕೆ ಬರು

ತ್ತದೆ. ಈ ಶಂಕೆಗೆ ಉತ್ತರವನ್ನು ವೈದ್ಯಕ ಶಾಸ್ತ್ರದಿಂದ ದೊರಕಿಸಿಕೊಳ್ಳ ಬೇಕು. ಅನ್ಯಶಾಸ್ತ್ರಗಳಂತೆ ವೈದ್ಯಕವೂ ಪರಸ್ತ್ರೀಗಮನವು ಆಯುಸ್ಸ ವನ್ನು ನಾಶಮಾಡುತ್ತದೆಯೆಂದು ಕರೆಯುತ್ತದೆಯಾದರೂ, ಕಾಮಜ್ವರದಲ್ಲಿ ಪ್ರಾಣವನ್ನುಳಿಸುವದಕ್ಕಾಗಿ ಇದರ ವಿಧಾನವನ್ನೂ ಮಾಡುವಂತೆ ಹೇಳು ತ್ತದೆ. ಪಾಪದ ಫಲವು ಪುಣ್ಯದಾಯಕವೂ ಅದರಂತೆ ಪುಣ್ಯದ ಫಲವು ಪಾಪದಾಯಕವೂ ಎಂದೆಂದಿಗೂ ಆಗದಿರುವಂತೆ, ಪರಸ್ತ್ರೀಗಮನವು ಯಾವದೇ ಕಾರಣದಿಂದ ಮಾಡಲ್ಪಟ್ಟರೂ ಕೂಡ ಎಂದಿಗೂ ಪುಣ್ಯಪ್ರದ ವಲ್ಲ; ಪಾಪವೆಂದೇ ಪರಿಗಣಿಸಲ್ಪಡುತ್ತದೆ. ಆದರೆ ಇಂಥ ಪಾಪಿಗಳನ್ನೂ ಕೂಡ ಉಳಿಸುವದರಲ್ಲಿಯೇ ಶಾಸ್ತ್ರಗಳ ಸಾರ್ವಭೌಮಿತ್ವವಿದೆ. ಆದ್ದರಿಂದ ಶಾಸ್ತ್ರವು ಹೇಳುವ ಪರನಾರೀಗಮನದ ಕಾಲ-ಕಾರ್ಯ ಕಾರಣ-ಭಾವವನ್ನು ಇಲ್ಲಿ ತೋರಿಸುತ್ತಾರೆ. ಇದಕ್ಕೆ ಮುಂಚೆ ಸ್ತ್ರೀಪುರುಷರಲ್ಲಿ ಕಾಮಜ್ವರದ ಕಾರಣವಾಗಿ ಯಾವ-ಯಾವ ಅವಸ್ಥೆ ಯಾಗುತ್ತದೆಯೆಂಬುದನ್ನು ಮೊದ ಲಿಗೆ ಹೇಳುತ್ತಾರೆ.

ವೈದ್ಯಕವು ಈ ಅವಸ್ಥೆಗಳನ್ನು ಹೇಳುವಂತೆ ಅವುಗಳ ಉಪಾಯ ವನ್ನೂ ಹೇಳುತ್ತದೆ. ಅವನ್ನೇ ಇಲ್ಲಿ ತೋರಿಸಲಾಗುವವು. ಕಾಮ ಜ್ವರದ ವಿಷಯಕ್ಕೆ ವಂಗಸೇನನು ಹೇಳುವದೇನೆಂದರೆ:

"ಕಾಮಜೆ ಚಿತ್ತವಿಭ್ರಂಶಸ್ತಂದ್ರಾಲಸ್ಯಮಭೋಜನಮ್ ।
ಹೃದಯೇ ವೇದನಾ ಚಾಸ್ಯ ಗಾತ್ರಂ ಚ ಪರಿಶುಷ್ಯತಿ॥"

ಯಾವಾಗ ಯಾವ ಪುರುಷನಿಗೆ ಇಲ್ಲವೆ ಸ್ತ್ರೀಗೆ, ಸ್ತ್ರೀಯ ಅಥವಾ ಪುರುಷನ ಆಕಾಂಕ್ಷೆಯಾಗುತ್ತವೆಯೋ ಆಗ ಅದರಿಂದ ಅವರಿಗೆ ಜ್ವರ ಬರುತ್ತವೆ, ಇದಕ್ಕೇ ಕಾಮಜ್ವರವೆಂದು ಅನ್ನುತ್ತಾರೆ. ಇದರಲ್ಲಿ ಮತಿ-ಭ್ರಂಶ, ತಂದ್ರಿ, ಆಲಸ್ಯ, ಊಟವಲ್ಲಿ ರುಚಿಯಿಲ್ಲದಿರುವದು, ಹೃದಯ ವೇದನೆ ಮತ್ತು ಶರೀರವು ಶುಷ್ಕವಾಗುತ್ತದೆ. ಇದರ ವಿಷಯಕ್ಕೆ ವಾಗ್ಭ ಟನು ನಿದಾನಸ್ಥಾನದ ಎರಡನೇ ಅಧ್ಯಾಯದಲ್ಲಿ ಹೇಳುವದೇನೆಂದರೆ:—

"ಕಾಮಾತ್ ಭ್ರಮೋಽರುಚಿರ್ದಾಹೋ ಹ್ರೀನಿದ್ರಾಧೀಧೃತಿಕ್ಷಯಃ॥

ಕಾಮದಿಂದ ಭ್ರಮೆ, ಅರುಚಿ, ನೀರಡಿಕೆ, ಲಜ್ಜಾ, ನಿದ್ರೆ, ಬುದ್ಧಿ ಮತ್ತು ಧೃತಿ ಇವುಗಳು ನಾಶವಾಗುತ್ತವೆ. ಈ ನಿತಾಂತ ಸತ್ಯವನ್ನೇ

ಆಧಾರವಾಗಿಟ್ಟುಕೊಂಡು "ಕಾಮಾತುರಾಣಾಂ ನ ಭಯಂ ನ ಲಜ್ಜಾ" ಅಂದರೆ ಕಾಮಾತುರರಿಗೆ ಯಾವದೇ ತರದ ಅಂಜಿಕೆಯಾಗಲೀ ನಾಚಿಕೆಯಾಗಲೀ ಇರುವದಿಲ್ಲ, ಎಂದು ನಾಣ್ಣುಡಿಯನ್ನೂ ಪ್ರಚಾರದಲ್ಲಿ ತರಲಾಗಿದೆ.

ಸ್ತ್ರೀಯರಿಗೆ ಕಾಮಜ್ವರದ ಕಾಲದಲ್ಲಿ:—

ಮೂರ್ಛಾಙ್ಗಮರ್ದಸ್ತ್ವಕ್ನೇತ್ರ ಚಾಪಲ್ಯಂ ಕುಚವಕ್ತ್ರಯೋಃ ।
ಸ್ವೇದಃ ಸ್ಯಾದ್ ಹೃದಿ ದಾಹಶ್ಚ ಸ್ತ್ರೀಣಾಂ ಕಾಮಜ್ವರೆ ಭವೇತ್ ॥

ಮೂರ್ಛೆ, ಮೈಮುರಿಯುವದು, ನೀರಡಿಕೆ, ಕಣ್ಣುಗಳಲ್ಲಿ ಚಂಚಲತೆ ಮೊಲೆಗಳಲ್ಲಿ ಚಂಚಲತೆ, ಮುಖದಲ್ಲಿ ಚಪಲತೆ, ಹೃದಯದಲ್ಲಿ ಅಂಜಿಕೆ ಮತ್ತು ಎದೆಗುದಿ ಇವು ಆಗುತ್ತವೆ. ಸ್ತ್ರೀಯ ಕಾಮಜ್ವರ ಉಪಾಯಗಳಲ್ಲಿ ಭಾವಮಿಶ್ರಿತವಾದ ಉಪಾಯಗಳಿರಬೇಕೆಂದು ಹೇಳುತ್ತಾರೆ. ಅವು ಯಾವುವೆಂದರೆ:—

ಸಂಧ್ಯಾಯಾಂ ಸಂಸ್ತರಃ ಕಾರ್ಯಃ ಸುಗಂಧೈಃ ಕುಸುಮೈರ್ಭೃಶಮ್
ಕ್ರೀಡನೀಯಂ ಸ್ವಕಾಂತೇನ ಸಹ ರಾತ್ರೌ ತಥಾ ಸ್ತ್ರೀಯಾಃ॥

ಸಂಧ್ಯಾಸಮಯಕ್ಕೆ ಹೂವಿನ ಹಾಸಿಗೆಯನ್ನು ಹಾಸಿ ಯಾವ ಪ್ರೀಯತಮನ ಆಕಾಂಕ್ಷೆಯಾಗಿರುತ್ತದೆಯೋ ಅವನ ಕೂಡ ಆಡಬೇಕು. ಸ್ತ್ರೀಯರ ಕಾಮಜ್ವರದ ಶಾಂತಿಗಾಗಿ ಅಂದರೆ ಅದು ಯಾವಾತನ ಆಕಾಂಕ್ಷೆಯಿಂದ ಉದ್ಭೂತವಾಗಿದೆಯೋ ಆತನ ಸಂಗದಿಂದ ಶಾಂತವಾಗುತ್ತದೆ. ಇನ್ನು ಪುರುಷರ ಕಾಮಶಾಂತಿಯ ಉಪಾಯಗಳನ್ನು ಹೇಳುತ್ತಾರೆ

ಕಾಮಿನ್ಯಾಃ ಅಧರ್ಯಾಃ ಸದ್‌ವಾಕ್ಯಮೇವ ಚ, ಆಶ್ವಾಸನೇಷ್ಟಲಾಭೇ-
ನ ವಾಯೋಃ ಪ್ರಶಮನೇನ ಚ ।
ಹರ್ಷಣೈಶ್ಚ ಶಮಂ ಶಾಂತಿ ಕಾಮಶ್ರೋಧಭಜುಜ್ವರಾಃ ॥

ಕಾಮಜ್ವರದಲ್ಲಿ ಸುಂದರಿಯರ ಮಧುರವಚನಗಳೇ ಶಾಂತಿಯನ್ನು ಉತ್ಪನ್ನಮಾಡುತ್ತವೆ. ಮಿತ್ರರು ಯಾವಾಗ "ಮುಂಡವು ಪಿಂಡದಿಂದ

ಬೇರೆಯಾಗುವದಿದ್ದರೂ ಅಡ್ಡಿಯಿಲ್ಲ; ಆದರೆ ನಾವು ನಿಮ್ಮ ಕಾರ್ಯಸಿದ್ಧಿಯಾಗುವಂತೆ ಮಾಡುತ್ತೇವೆ, ನೀವು ಸಾವಧಾನದಿಂದ ಇರಿ" ಎಂದು ಯಾವಾಗ ಆಶ್ವಾಸನೆಯನ್ನು ಕೊಡುತ್ತಾರೋ ಆಗ ಅದರಿಂದಲೂ ಶಾಂತಿ ಸಿಕ್ಕುತ್ತದೆ. ಯಾರ ವೇದನೆಯು ಇದರಿಂದ ಶಮನವಾಗದಷ್ಟು ವಿಕೋಪಕ್ಕೆ ಹೋಗಿದೆಯೋ ಅವರು ಯಾವಾತನ ಇಲ್ಲವೆ ಯಾವಾತಳ ಕಾರಣವಾಗಿ ಈ ಜ್ವರವು ಉತ್ಪನ್ನವಾಗಿದೆಯೋ ಅವರಿಗೆ, ಅವನ ಇಲ್ಲವೆ ಅವಳ ಪ್ರತ್ಯಕ್ಷ ಸನ್ನಿಧಾನವೇ ಕೊನೆಯ ಔಷಧ. ಇದನ್ನು ಕಡಿಮೆ ಮಾಡಲು ಇನ್ನೂ ಅನೇಕ ಉಪಾಯಗಳಿವೆ ಆದರೆ ಅವುಗಳಲ್ಲಿ ಅಷ್ಟೊಂದು ಸತ್ವವಿರದ್ದರಿಂದ ಅವನ್ನಿಲ್ಲಿ ಹೇಳಲಾಗಿಲ್ಲ. ಇದನ್ನೆಲ್ಲವನ್ನೂ ಇಲ್ಲಿ ಹೇಳುವದರ ಇಂಗಿತವು ಪರಸ್ತ್ರೀಗಮನವು ಪಾಪಕಾರಿಯಲ್ಲವೆಂಬುದು ಸೂತ್ರಕಾರರದ್ದೂ ಇಲ್ಲ,ಅದರಂತೆ ಯಾವ ಶಾಸ್ತ್ರಕಾರರ ಮನೀಷೆಯೂ ಇಲ್ಲ. ಧರ್ಮಶಾಸ್ತ್ರವು ಇಂಥ ಇಚ್ಛೆಗಳು ಮನಸ್ಸಿನಲ್ಲಿ ಉದ್ಭೂತವಾದರೂ ಪಾಪಕರವೆಂದು ಹೇಳುತ್ತವೆ. ಅದರಂತೆ ಕಾಮಶಾಸ್ತ್ರವೂ ಕೂಡ ಪರಸ್ತ್ರೀಪುರುಷರಲ್ಲಿ ಪ್ರವೃತ್ತರಾಗುವ ಕಾರಣ ಮೀಮಾಂಸೆಯನ್ನು ಹೇಳಿದರೂ ಕೂಡ, ಅದನ್ನು ಹೀನಾಯವಾಗಿ ಕಾಣುತ್ತದೆ. ಹೀಗಿದ್ದರೂ ಇದನ್ನು ಇಲ್ಲಿ ಹೇಳುವ ಕಾರಣವು ಶಿಷ್ಟರು ತಮ್ಮ ಸ್ತ್ರೀಯರನ್ನು ಈ ಕಾರಣಗಳಿಂದ ನಿರಂತರವೂ ಅವರನ್ನು ದೂರವಿರಿಸಬೇಕೆಂಬುದೇ ಇದೆ. ಸೂತ್ರಕಾರರ ಉದ್ದೇಶವು ಸಭ್ಯತೆಯದಿದ್ದರೂ ಪರಸ್ತ್ರೀಯರನ್ನು ಪ್ರಾಪ್ತಮಾಡಿಕೊಳ್ಳುವ ಉಪಾಯಗಳನ್ನೇಕೆ ಹೇಳುತ್ತಾರೆ? ಎಂಬುವ ಶಂಕೆ ಬರುತ್ತದೆ. ಈ ಶಂಕೆಗೆ ಸೂತ್ರಕಾರರ ಉತ್ತರವೇನೆಂದರೆ: ಪರಸ್ತ್ರೀ ವಶೀಕರಣಕ್ಕಾಗಿ ಆಚರಣೆಯಲ್ಲಿ ತರಬೇಕಾದ ಉಪಾಯ ಹಾವ ಭಾವಗಳ ಪ್ರದರ್ಶನದಿಂದ ಅವರು ವಶರಾಗುತ್ತಾರೆಂಬುವದು ಸಿದ್ಧವಾಗುತ್ತದೆಯೋ ಆಗ ಅವೇ ಉಪಾಯಗಳು ಸ್ವಯಂವರ ಮತ್ತು ಸ್ವಯಂ ಭಾರ್ಯೆಯನ್ನು ಆರಿಸುವದರಲ್ಲಿ ಉಪಯೋಗಕ್ಕೆ ಬೀಳುತ್ತವೆ. ಇದೇ ಕಾರಣಕ್ಕಾಗಿಯೇ ಅದನ್ನು ಇಲ್ಲಿ ವಿಸ್ತಾರದಿಂದ ಹೇಳಲಾಗಿದೆ.

ಈ ಅಧಿಕರಣದಲ್ಲಿ ಕೇವಲ ವಿವಾಹಕ್ಕೆ ಯೋಗ್ಯರಾದ ಮತ್ತು ವಿವಾಹ ಮಾಡಿಕೊಳ್ಳಲು ತಯಾರಾದ, ವಯಸ್ಕ; ಸ್ವಯಂವರ ಮಾಡಿಕೊಳ್ಳುವ ಕನ್ಯೆಯರಿಗಾಗಿ ಮತ್ತು ಅವರ ಆಕಾಂಕ್ಷೆಯಿದ್ದ ಯುವಕರನ್ನೇ ಪ್ರಧಾನ

ವಾಗಿಟ್ಟುಕೊಂಡು ಅವರ ವಿಷಯಕ್ಕೆನೇ ಈ ಅಧಿಕರಣವನ್ನು ಹೇಳ ಲಾಗಿದೆ. ಇದು ಅನ್ಯ ವಿವಾಹಿತ ಸ್ತ್ರೀಯರಿಗೂ ಸಮಾನವಾಗಿ ಹತ್ತು ವದರಿಂದ ಅದನ್ನು ಇಲ್ಲಿ ಕೂಡಿಸಲಾಗಿದೆ. ಆದರೂ ಈ ವಿಷಯಕ್ಕೆನೇ ಮೀಸಲಾಗಿಟ್ಟ ಕನ್ಯಾಸಂಪ್ರಯುಕ್ತಕ ಅಧಿಕರಣವು ಇರುತ್ತಿರುವಾಗಲೂ ಕೂಡ ಇದನ್ನಿಲ್ಲಿ ಏಕೆ ಹೇಳಲಾಗಿದೆ ಎಂಬುವ ಶಂಕೆ ಬರುತ್ತದೆ, ಇದಕ್ಕೆ ಉತ್ತರವೇನೆಂದರೆ: ಮೊದಲಿಗೆ ಉತ್ತಮ ವಿವಾಹಗಳನ್ನು ಹೇಳಲಾಯಿತು, ಆವರೆ ಇನ್ನು ತುಸು ಪ್ರಯತ್ನದಿಂದ ಮಾಡಲ್ಪಡುವ ವಿವಾಹಗಳಿರುವದ ರಿಂದ ಅವನ್ನು ಎರಡು ಪ್ರಕರಣಗಳಲ್ಲಿ ಹೇಳಲಾಗಿವೆ, ಆವರೆ ಅವು ಅಪೂರ್ಣವಿದ್ದದರಿಂದ, ಅವುಗಳಿಂದ ಪೂರ್ಣ ಜ್ಞಾನವಾಗುವಂತೆ ಇಲ್ಲ. ಅದಕ್ಕಾಗಿಯೇ ಇದರ ಆವಶ್ಯಕತೆಯಿದೆ,

ಯಾವಾಗ ಕನ್ಯೆಯು ದೊಡ್ಡವಳಾದ ಮೇಲೆ ಒಬ್ಬನಮೇಲೆ ತುಸು ಇನ್ನೊಬ್ಬನಮೇಲೆ ಹೆಚ್ಚು ಮಗದೊಬ್ಬನ ಮೇಲೆ ಪೂರ್ಣ ಅನುರಕ್ತ ಳಾಗಿ ಸಂಭೋಗವನ್ನು ಕೂಡ ಮಾಡಿಬಿಟ್ಟಿದ್ದಾಳೆ (ಕುತೂಹಲದಿಂದ) ಆದರೆ, ಪ್ರಕಟಳಾಗಿಲ್ಲ. ಪ್ರಕಟಳಾಗಿದ್ದರೂ ಕೂಡ ಅವಳ ತಾಯಿ-ತಂದೆ ಯರು ಆ ಲಗ್ನಕ್ಕೆ ವಿರುದ್ಧರಿದ್ದಾರೆ, ಈಗ ಅನ್ಯ ಪ್ರಯತ್ನಕಾರರು ಅವ ಳನ್ನು ಅವನವಳೆಂದು ತಿಳಿದೂ ಕೂಡ ತಾವೇ ಅವಳನ್ನು ವಶಮಾಡಿಕೊಳ್ಳ ಬೇಕೆಂದು ಮಾಡುವ ಉಪಾಯಗಳೂ ಕೂಡ ಪರಸ್ತ್ರೀಯರಮೇಲೆ ಮಾಡುವ ಉಪಾಯಗಳೇ. ಇದೇ ಕಾರಣಕ್ಕಾಗಿ,ಇದು ಅವರಿಗೆ ಹಿತಕಾರಕ ವಿರುವದರಿಂದ ವಾತ್ಸ್ಯಾಯನನು ಇಲ್ಲಿ ಹೇಳಿದ್ದಾನೆಂದು ಇಟ್ಟುಕೊಳ್ಳಲೂ ಅಡ್ಡಿಯಿಲ್ಲ. ಆದರೆ ಕನ್ಯೆಯು ಸಂಭೋಗಮಾಡಲ್ಪಟ್ಟರೆ-ಮಾಡಲ್ಪಟ್ಟವನ ಕೂಡ ಲಗ್ನವಾಗದೇ, ಅವಳು ಅವನ ಮನೆಯಾಕೆ ಆಗದಿರುವಾಗ, ಅವನ ವಳು ಹೇಗೆ? ಎಂಬುವ ಪ್ರಶ್ನೆ ಬರುತ್ತದೆ. ಆದರೆ, ಅವಳ ತಾಯಿ-ತಂದೆ ಯರು ಅನ್ಯತ್ರ ಅವಳ ವಿವಾಹವನ್ನು ಗೊತ್ತುಮಾಡಿದ್ದರೂ ಕೂಡ ಯಾವಾತನಲ್ಲಿ ಅವಳ ಹೃದಯ ನಟ್ಟುಹೋಗಿದೆಯೋ ಅವನವಳೇ ಅವಳಾಗುತ್ತಾಳೆ. ಹೀಗಿರುವಾಗ ಈ ನೈತಿಕ ಬಂಧನವು ಲಗ್ನಬಂಧನ ಕ್ಕಿಂತಲೂ ಶ್ರೇಷ್ಠವೆಂದಮೇಲೆ ಅವಳು ಅನ್ಯರಿಗೆ ಪರಕೀಯಳಲ್ಲದೆ ಮತ್ತೇನು?

ವಾತ್ಸ್ಯಾಯನನ ಉದ್ದೇಶವು ಕೇವಲ ಭರತಖಂಡಕ್ಕಷ್ಟೇ ಮೀಸಲಾಗಿಲ್ಲ, ಅದು ವಿಶ್ವವ್ಯಾಪಿಯಾದದ್ದು. ಅವನ ಕನ್ಯಾಸಂಪ್ರಯುಕ್ತಕ ಹಾಗೂ ಇನ್ನೂ ಕೆಲವು ಅಧಿಕರಣಗಳು ಅನ್ಯ ಖಂಡಗಳಲ್ಲಿಯೂ ಕೂಡ, ಉಪಯೋಗಕ್ಕೆ ಬರುವಂಥವಿವೆ ಎಂಬುದು ಸಿದ್ಧವಾಗಿದೆ. ಎಲ್ಲಿ ಕನ್ಯೆಯರು ವಿವಾಹಪೂರ್ವದಲ್ಲಿಯೇ ಸಮಾಗಮವನ್ನು ಹೊಂದಿದ್ದರೂ ಕೂಡ ಕನ್ಯೆಯರೆಂದೇ ತಿಳಿಯಲ್ಪಡುತ್ತಾರೋ, ಅದರಂತೆ ಕಲೆತೂ ಅನ್ಯಕಡೆಗೆ ಲಗ್ನ ನಿಶ್ಚಯಮಾಡಿಕೊಳ್ಳುತ್ತಾರೋ ಮತ್ತು ವರಸಂಶೋಧನೆಯ ಕಾಲಕ್ಕೆ ಅನೇಕಾನೇಕ ಜನರ ಕೂಡ ಕಲೆತು ಸಮಾಗಮವನ್ನು ಹೊಂದುತ್ತಾರೋ, ಇದರಂತೆ ಪುರುಷರದ್ದೂ ಅವಸ್ಥೆಯಾಗುತ್ತದೆ. ಅದಕ್ಕಾಗಿ ಈ ಅಧಿಕರಣವು ಮುಖ್ಯತಃ ಅಂಥವರ ಸಲುವಾಗಿಯೇ ಅದೆ.

ಇಂಥ ಉಪಾಯಗಳು ಈಗಾಗಲೇ ಜನರ ಎದುರಿಗೆ ಇಡಲ್ಪಟ್ಟದ್ದಾವೆಂದು ಅನ್ನಲಿಕ್ಕೆ ಬರುವದಿಲ್ಲ. ಆದರೆ, ಜಗತ್ತಿಗೆ ಇಂಥ ಉಪಾಯಗಳ ಅವಶ್ಯಕತೆಯು ಎಂದಿನಿಂದ ಬೇಕಾಯಿತೋ ಆ ದಿನದಿಂದಲೇ ಇವು ಪ್ರಚಲಿತವಾಗಿವೆ. ಇವುಗಳ ಆಗುಹೋಗುಗಳಿಗಂತೂ ಲೆಕ್ಕವೇ ಇಲ್ಲ, ಪೂರ್ವಾಚಾರ್ಯರು ಕೇವಲ ಇವುಗಳ ವಸ್ತುಸ್ಥಿತಿಗಳನ್ನಷ್ಟೇ ಹೇಳಿದ್ದಾರೆ. ಅವುಗಳ ಮುಖ್ಯೋದ್ದೇಶವು ಕಾಮೀ ಜನರಿಗೆ ಈ ಪ್ರಯತ್ನಗಳ ಜ್ಞಾನವಿದ್ದರೆ ಅದು ಅವರನ್ನು ಸಂರಕ್ಷಿಸಬಲ್ಲದೆಂಬುದೇ ಇದೆ. (ಯಾವದೊಂದು ವಿಷಯದ ಪೂರ್ಣಜ್ಞಾನವು ಆ ವಿಷಯದ ಒಳಿತು ಕೇಡುಗಳನ್ನು ತಿಳಿಸಿಕೊಡುತ್ತದೆ. ಇವುಗಳ ಅರಿವಿದ್ದವರು ಆ ವಿಷಯದ ಬಗ್ಗೆ ಎಚ್ಚರದಿಂದಿರುತ್ತಾರಲ್ಲದೆ, ಅದರ ಒಳಿತುಗಳನ್ನೇ ಉಪಭೋಗಿಸಿ; ಕೆಡಕನ್ನು ಸಾಧ್ಯವಿದ್ದಷ್ಟೂ ದೂರವಿರಿಸುತ್ತಾರೆಂಬುದೇ ಇದರ ಇಂಗಿತ. **ಅನು.**) ಪೂರ್ವಾಚಾರ್ಯರ ಉದ್ದೇಶವು ಲೋಕವಿಧ್ವಂಸಕವಿಲ್ಲ ಆದರೆ ಸಂಸಾರದ ಮರ್ಯಾದೆ ಉಳಿಯಬೇಕೆಂಬುದೇ ಅವರ ಪ್ರಯಾಸ.

---

## ಅಧ್ಯಾಯ : ೧

# ಸ್ತ್ರೀಪುರುಷಶೀಲಾವಸ್ಥಾಪನ ಪ್ರಕರಣ

**ಕನ್ಯಾಪುನರ್ಭೂನಾಯಿಕಯೋಃ ಸಮಾಗಮೋಪಾಯಃ ಸವಿಶೇಷ ಉಕ್ತಃ। ತತ್ರ ಸ್ತ್ರೀಯಃ ಕಾಮ ಏವ ಪರದಾರೇಭ್ಯೋಽರ್ಥ-ಕಾಮಾವಿತಿ ತತ್ಸಮಾಗಮೋಪಾಯದರ್ಶನಾರ್ಥಂ ವೈಶಿಕಾತ್ಪ್ರಾಕ್ಪಾರದಾರಿಕಮುಚ್ಯತೇ ॥**

ಕನ್ಯೆ ಹಾಗೂ ಪುನರ್ಭೂ ನಾಯಿಕೆಯರ ಸಮಾಗಮದ ಉಪಾಯಗಳನ್ನು ಸವಿಸ್ತರವಾಗಿ ಹೇಳಲಾಗಿದೆ. ಇದರಲ್ಲಿ ವೇಶ್ಯೆಯರ ಕಾರ್ಯವೂ ಕೂಡ ಉಪಯೋಗಕರವಿದೆ. ಆದರೆ ಹೆಂಡತಿಯರಿಂದ ಅರ್ಥ ಹಾಗೂ ಕಾಮ ಇವೆರಡೂ ಪ್ರಾಪ್ತವಾಗುತ್ತವೆಯಾದುದರಿಂದ ಪರಸ್ತ್ರೀಗಮನದ ಉಪಾಯಗಳನ್ನೇ ಹೇಳುವದಕ್ಕಾಗಿ ವೈಶಯಿಕ (ವೇಶ್ಯೆಯರ ಸಂಬಂಧ) ಪರದಾರಿಕ ಅಧಿಕರಣವನ್ನು ಹೇಳಲಾಗಿದೆ.

ಇದರಲ್ಲಿಯೂ ಕೂಡ ಸ್ತ್ರೀಪುರುಷರ ಸ್ವಭಾವಗಳನ್ನು ಹೇಳದ ವಿನಃ ಅನ್ಯ ವ್ಯಾಪಾರಗಳನ್ನು ಹೇಳಬರದಿರುವದರಿಂದ, ಏಕೆಂದರೆ ಜನರಲ್ಲಿ ಸ್ವಭಾವ ಪರಿಚಯವೇ ಮೊದಲಿಗೆ ಆಗುತ್ತದೆ, ಇದರ ನಂತರ ಅನ್ಯ ಕೆಲಸಗಳಾಗುತ್ತವೆ, ಆದಕ್ಕಾಗಿಯೇ ಎಲ್ಲಕ್ಕಿಂತ ಮುಂಚೆ ಸ್ತ್ರೀಪುರುಷರ ಸ್ವಭಾವಗಳನ್ನೇ ಹೇಳಲಾಗುತ್ತದೆ, ಆದರೆ—

**ಪರಪರಿಗ್ರಹಿತಾಸು ಕಾಮಃ ಪ್ರತಿಸಿದ್ಧ ಇತಿ ಚೇದಾಹ ॥**

ಪರಸ್ತ್ರೀಯರಲ್ಲಿ ಕಾಮುಕ ವ್ಯಾಪಾರಗಳು ನಿಷಿದ್ಧವೆಂದು ಹೇಳುತ್ತಿರುವಾಗ ಏನು ಕಾರಣ ಈ ಪ್ರಕರಣವನ್ನು ಹೇಳಲಾಗುತ್ತದೆ? ಇದರ ಉತ್ತರವನ್ನು ಸೂತ್ರಕಾರರು ಮುಂದಿನಂತೆ ಹೇಳುತ್ತಾರೆ:—

**ವ್ಯಾಖ್ಯಾತಕಾರಣಾಃ ಪರಪರಿಗ್ರಹೋಪಗಮಾಃ ॥**

ಪರಸ್ತ್ರೀಗಮನದ ಕಾರಣಗಳನ್ನು ಹಿಂದೆ ಹೇಳಲಾಗಿದೆ, ಅವುಗಳನ್ನೇ ಇಲ್ಲಿ ಸ್ಮರಣಮಾಡಿಕೊಡುತ್ತಾರೆ.

ಪರಸ್ತ್ರೀಯರಲ್ಲಿ ಮೊದಲಿಗೆ ನೋಡತಕ್ಕಂಥ ವಿಷಯಗಳು:

**ತೇಷು ಸಾಧ್ಯತ್ವಮನತ್ಯಯಂ ಗಮ್ಯತ್ವಮಾಯತಿಂ ವೃತ್ತಿಂ ಚಾದಿತ ಏವ ಪರೀಕ್ಷೇತ ॥**

ಪರಸ್ತ್ರೀಯ ವಿಷಯಕ್ಕೆ ತಲೆಹಾರುವಂತೆ ಇರದಿದ್ದರೆ, ಸಿಗುವವಂತಿದ್ದರೆ, ಒಟ್ಟಿನ ಮೇಲೆ ಪ್ರಾಪ್ತಿಯಾಗುತ್ತಿದ್ದರೆ ಎಂಬುವ ಮಾತುಗಳನ್ನು ನೋಡಿಕೊಂಡು ಪ್ರವೃತ್ತರಾಗಬೇಕು. ಹೇಳಿದ ಕಾರಣಗಳಾದಮೇಲೆ ಅವಳನ್ನು ಸಾಕುವದು ಸಾಧ್ಯವೇ, ಎಂಬುದರ ಪರೀಕ್ಷೆಮಾಡಬೇಕು. ಹಾಗೆ ಮಾಡಲಿಕ್ಕೆ ತಲೆಕೂದಲು ಉದುವಂತಿರಬಾರದು. ಅದರಂತೆ ಅವಳು ಗೂಢಳೂ-ಹುಚ್ಚಿಯೂ ಇರಬಾರದು. ಅವಳನ್ನು ಇಟ್ಟುಕೊಂಡರೆ ತನ್ನ ಪ್ರಭಾವವು ಏನಾಗಬಹುದು ಮತ್ತು ಅವಳನ್ನು ವಶಮಾಡಿಕೊಂಡಮೇಲೆ ಯಾವ ಲಾಭವಾಗಬಹುದು? ಎಂಬ ಎಲ್ಲ ಸಂಗತಿಗಳನ್ನು ವಿಚಾರ ಮಾಡಬೇಕು. ಈ ಕಾರಣಗಳಲ್ಲದೆ ಇನ್ನೂ ಒಂದು ಮುಖ್ಯವಾದ ಕಾರಣವಿದೆ. ಅದೇನೆಂದರೆ; ಅದನ್ನು ಮಾಡದ ವಿನಃ ಮನಸ್ಸು ಸ್ಥಿಮಿತಕ್ಕೆ ಬರದಿರುತ್ತಿದ್ದರೆ ಆಗ ಅವಶ್ಯವಾಗಿಯೂ ಮಾಡಬೇಕು.

**ಯದಾ ತು ಸ್ಥಾನಾತ್‌ಸ್ಥಾನಾಂತರಂ ಕಾಮಂ ಪ್ರತಿಪದ್ಯಮಾನಂ ಪಶ್ಯೇತ್‌ದಾತ್ಮಶರೀರೋಪಘಾತತ್ರಾಣಾರ್ಥಂ ಪರಪರಿಗ್ರಹಾನಭ್ಯುಪಗಚ್ಛೇತ್ ॥**

ಕೆಲಸದ ನಿಮಿತ್ಯ ಮೇಲಿಂದ ಮೇಲೆ ಪ್ರವಾಸಮಾಡಬೇಕಾಗುತ್ತದೆಯೋ ಆಗ ಶರೀರ (ಆರೋಗ್ಯ) ರಕ್ಷಣಾರ್ಥವಾಗಿ ಪರಸ್ತ್ರೀಯರ ಜತೆಗೆ ಸಮಾಗಮವನ್ನು ಮಾಡಬಹುದು. ಮತ್ತು ಯಾವಾಗ ಪರಸ್ತ್ರೀಯನ್ನು ನೋಡಿ ಕಲೆಯಬೇಕೆಂಬುವ ಇಚ್ಛೆಯು ಉತ್ಪನ್ನವಾಗುವದೇ ಇಚ್ಛಾರೂಪದ ಕಾಮವು. ಈ ಕಾಮದ ಪ್ರಥಮಾವಸ್ಥೆಯಿಂದ ದ್ವಿತಿಯಾವಸ್ಥೆಗೆ ಹೋದಮೇಲೆ ಅವಳನ್ನು ಸಮಾಗಮಿಸದ ವಿನಃ ಮನಸ್ಸು ಸ್ಥಿಮಿತಕ್ಕೆ ಬರದಿದ್ದರೆ ಆಗ್ಗೆಯೂ ಪರಸ್ತ್ರೀಗಮನವನ್ನು ಮಾಡಬಹುದು.

ಕಾಮದ ಅವಸ್ಥೆಗಳು ಹತ್ತು ಅವೆ. ಅವುಗಳ ವಿವರಣೆಯನ್ನು ರತವಿಶೇಷ ಪ್ರಕರಣದಲ್ಲಿ ಮಾಡಲಾಗಿದೆ. ಅವನ್ನೇ ಇಲ್ಲಿ ವಿಸ್ತರಿಸಿ ಹೇಳಲಾಗುತ್ತದೆ.

**ಚಕ್ಷುಃಪ್ರೀತಿರ್ಮನಃಸಂಗಃಸಂಕಲ್ಪೋತ್ಪತ್ತಿರ್ನಿದ್ರಾಚ್ಛೇದಸ್ತನುತಾ ವಿಷಯೇಭ್ಯೋವ್ಯಾವೃತ್ತಿರ್ಲಜ್ಜಾಪ್ರಣಾಶ ಉನ್ಮಾದೋಮೂರ್ಛಾ ಮರಣಮಿತಿ ತೇಷಾಂ ಲಿಂಗಾನಿ ॥**

ಕಣ್ಣುಗಳಲ್ಲಿ ಪ್ರೇಮದ ಮಿಂಚು, ಮನಸ್ಸಿನ ಆಸಕ್ತಿ, ಸಂಕಲ್ಪ ಜನನ ನಿದ್ರೆಬರದಿರುವದು, ದುರ್ಬಲರಾಗುವದು, ವಿಷಯೋಪಭೋಗ ಗಳಲ್ಲಿ ಇಚ್ಛೆ ಇರದಿರುವದು, ನಾಚಿಕೆ ಇಲ್ಲದಿರುವದು, ಹುಚ್ಚು, ಮೂರ್ಛೆ ಮತ್ತು ಮರಣ ಈ ಹತ್ತು ಕಾಮದ ಅವಸ್ಥೆಗಳಿವೆ. ಓರ್ವ ಸುಂದರ ಸ್ತ್ರೀಯನ್ನು ನೋಡುತ್ತಲೇ ಅವಳ ಕೂಡ ರತಿಕೇಳಿಯನ್ನು ಮಾಡ ಬೇಕೆಂದು ಪುರುಷನ ಮನಸ್ಸಿನಲ್ಲಿ ಇಚ್ಛಾರೂಪಿಯಾದ ಕಾಮವು ಉತ್ಪನ್ನ ವಾಗುತ್ತದೆ, ಆಗ ಮತ್ತು ಆದರ ನಂತರ ಅವನ ಕಂಣುಗಳು ಅವಳ ವಿಷಯಕ್ಕೆ ಉತ್ಪನ್ನವಾದ ಪ್ರೇಮಕ್ಕೆ ಕಾರಣವಾಗಿ ಚಲವಿಚಲ(ಚಂಚಲ) ವಾಗಹತ್ತುತ್ತದೆ. ಮತ್ತು ಅವಳನ್ನು ಕೂಡದಿದ್ದರೆ ಅವರಲ್ಲಿಯೇ ಮನಸ್ಸು ನಡುತ್ತದೆ. ಈ ಆಸಕ್ತಿಯ ಹಿಂದೆ ಅವನ ಮನಸ್ಸಿನಲ್ಲಿ ಅವಳನ್ನು ಯಾವ ರೀತಿಯಿಂದ ಭೆಟ್ಟಿಯಾಗಲಿ? ಎಂಬುವ ಸಂಕಲ್ಪ ಹುಟ್ಟುತ್ತದೆ. ಭೆಟ್ಟಿಯಾಗುತ್ತಲೇ ಎನನ್ನು ಹೇಳಲಿ ಏನನ್ನು ಬಿಡಲಿ? ಎಂದು ಮುಂತಾಗಿ ಸಂಕಲ್ಪವಿಕಲ್ಪಗಳಲ್ಲಿ ಇರುವವರಿಗೆ ನಿದ್ರೆಯಾದರೂ ಹೇಗೆ ಬರಬೇಕು? ಒಂದೇ ಸವನೆ ನಿದ್ದೆಗೆಟ್ಟರೆ ದೇಹ ಕೃಶವಾಗುವದು ಅನಿವಾರ್ಯ ಯಾವಾಗ ಎಲ್ಲಕಡೆಯಿಂದಲೂ ಮನಸ್ಸು ಜಗ್ಗಿಕೊಂಡು ಪ್ರಿಯತಮ ಳಲ್ಲಿಯೇ ನಟ್ಟುಹೋಗುತ್ತದೆಯೋ ಆಗ ಬುದ್ಧಿಗೆ ಬೇರೆ ವಿಷಯಗಳು ಉರಿಯುವ ಕೊಳ್ಳಿಯಂತೆ ಹೇಗೆ ಹತ್ತಬಹುದು? ಯಾವಾಗ ವಿಷಯ ಗಳಲ್ಲಿ ಮನಸ್ಸು ನಿಲ್ಲುವದಿಲ್ಲವೋ ಆಗ ನಾಚಿಕೆಯಾದರೂ ಹೇಗೆ ಇರ ಬೇಕು? ನಿರ್ಲಜ್ಜರಾಗುವ ಕಾರಣ ಗುರುಜನರ ವಿಷಯಕ್ಕೆ ಹೆದ ರಿಕೆಯೇ ಇರುವದಿಲ್ಲ. ನಾಚಿಕೆಯೂ ಅಂಜಿಕೆಯೂ ಇರದಂತೆಯಾದ ಮೇಲೆ ಹುಚ್ಚು ಹಿಡಿಯುತ್ತದೆ. ಹುಚ್ಚು ಹಿಡಿದನಂತರ ದೇಹಾರೋಗ್ಯವು ಕೆಟ್ಟುಹೋಗಿ ಮೂರ್ಛೆ ಬರಹತ್ತುತ್ತದೆ. ಇದರ ನಂತರ ಈ ದುಃಖೀ ಜೀವನದ ಪ್ರಾಣಪಕ್ಷಿಯು ಹಾರಿಹೋಗಿ ಬಿಡುತ್ತದೆ. ಈ ಹತ್ತು ಕಾಮದ ಅವಸ್ಥೆಗಳನ್ನು ತಿಳಿದುಕೊಳ್ಳುವ ಚಿಹ್ನಗಳಿವೆ. ಏಕೆಂದರೆ ಈ ಕಾಯವು ಅವುಗಳದೇ ಆದೆ. [ಕಾಮದ ಈ ಹತ್ತು ಅವಸ್ಥೆಗಳನ್ನು ಉಚ್ಚತರವಾದ

ಸಾಹಿತ್ಯಕ್ಕೆ ಸಹಾಯಕವಾಗಿ ನಾಯಕ-ನಾಯಿಕೆಯರಲ್ಲಿ ಅವಸ್ಥೆಗೆ ತಕ್ಕಂತೆ ರಸಗಳ ಸಂಯೋಗವಾಗುವಂತೆ ಕಥೆಯನ್ನಾಗಲೀ ಕಾವ್ಯ-ನಾಟಕಗಳನ್ನಾಗಲೀ ಹೆಣೆದದ್ದು ಬಹುತರವಾಗಿ ಪ್ರತಿಯೊಂದು ಹಿಂದೂ ಸಾಹಿತ್ಯ ಗ್ರಂಥಗಳಲ್ಲಿ ಕಾಣಬಹುದು. ಉದಾಹರಣಾರ್ಥವಾಗಿ ಮಹಾಕವಿ ಕಾಳಿದಾಸನ ಶಕುಂತಲೆ, ವಿಕ್ರಮೋರ್ವಸಿ ಅದರಂತೆ ಬೇರೆ ಬೇರೆ ಕವಿಗಳ ನಾಟ್ಯಸಾಹಿತ್ಯವು ಇದರಿಂದಲೇ ಸುರುವಾಗಿವೆ. ಎಲ್ಲ ಗ್ರಂಥಗಳೂ ಇವುಗಳ ಮೇಲೆ ಪ್ರಕಾಶವನ್ನು ಚೆಲ್ಲಿವೆ ಆದರೆ, ಮಾಲತೀ ಮಾಧವದಲ್ಲಿ ಮಾತ್ರ ಕಾಮಪೀಡಿತನಾದ ಮನುಷ್ಯನ ಅವಸ್ಥೆಯು ಏನಾಗುತ್ತದೆಯೆಂಬುದು ಅತ್ಯಂತ ಹೃದಯಂಗಮವಾಗಿ ವರ್ಣಿತವಾಗಿದೆ. ಇವುಗಳ ವರ್ಣನೆಯನ್ನು ಇಷ್ಟೊಂದು ಪರಿಪೂರ್ಣವಾಗಿ ಮಾಡಿದರೂ ಪ್ರಾಚೀನ ಸಂಸ್ಕೃತ ಸಾಹಿತ್ಯದಲ್ಲಿ ನಾಯಕನ ಮೃತ್ಯುವರ್ಣನೆಯು ಎಲ್ಲಿಯೂ ಇಲ್ಲ ಆತನು ತನ್ನ ಜೀವನವನ್ನು ತೃಣಪ್ರಾಯವಾಗಿ ತಿಳಿದರೂ ಅವನ ಸಹಾಯಕರು ಅವನನ್ನು ಸಾಯಗೊಡುವದಿಲ್ಲ. ಇದಕ್ಕೆ ವ್ಯತಿರಿಕ್ತವಾಗಿ ವಿಯೋಗ ವ್ಯಥೆಯಿಂದ ಪೀಡಿತನಾದ ನಾಯಕನು ಸಾವಿಗೆ ಅಂಜುವಂತಿದ್ದರೆ ಆ ಸಾಹಿತ್ಯವು 'ಚಿಲ್ಲರೆ' ಎಂದು ತಿಳಿಯಲಾಗಿದೆ. ಒಟ್ಟಿನಮೇಲೆ ನಾಯಕನನ್ನು ಸಾವಿನ ದವಡೆಯಲ್ಲಿಂದ ಬಿಡಿಸಿ ತರುತ್ತಾರಲ್ಲದೆ ಅವನನ್ನು ಸಾಯಗೊಡುವದಿಲ್ಲ. ಆದರೆ ಉರ್ದು ಅಥವಾ ಫಾರಸೀ ಸಾಹಿತ್ಯದಲ್ಲಿ ಎಲ್ಲವೂ ಇದಕ್ಕೆ ವಿಪರೀತವಾಗಿದೆ. ನಾಯಕನನ್ನು ಗೋರಿಗೆ ಕಳಿಸದ ವಿನಃ ಅವರಿಗೆ ಆನಂದವೇ ಇಲ್ಲ. ಗೋರಿಯಲ್ಲಿಯೂ ಅವನು ಒದ್ದಾಡುವಂತೆ ಮಾಡುತ್ತಾರೆ. ಉದಾಹರಣೆಗಾಗಿ 'ಲೈಲಾ-ಮಜನು' ಈ ನಾಟಕ. ಆದರೆ ಹಿಂದೂ ಸಾಹಿತ್ಯದಲ್ಲಿ ಹೀಗಿಲ್ಲ. **ಅನು.)**

ಆಕಾರ ಮತ್ತು ಲಕ್ಷಣಗಳಿಂದ ಶೀಲ ಮುಂತಾದವುಗಳ ಪರೀಕ್ಷೆ.

**ತತ್ರಾಕೃತಿತೊ ಲಕ್ಷಣತಶ್ಚ ಯುವತ್ಯಾಃ ಶೀಲಂ ಸತ್ಯಂ ಶೌಚಂ ಸಾಧ್ಯತಾಂ ಚಂಡವೇಗತಾಂ ಚ ಲಕ್ಷಯೇದಿತ್ಯಾಚಾರ್ಯಾಃ ॥**

ಆಕಾರ ಮತ್ತು ಲಕ್ಷಣಗಳಿಂದ ಯುವತಿಯ ಶೀಲ, ಸತ್ಯ, ನೀತಿ ಮತ್ತೆ, ಸಾಧ್ಯ ಮತ್ತು ಚಂಡವೇಗ ಇವುಗಳನ್ನು ತಿಳಿದುಕೊಳ್ಳಬಹುದು

ದೆಂದು ಆಚಾರ್ಯರ ಮತವಿದೆ. ರಾಗವಶರಾಗಿ ಪರಸ್ತ್ರೀಗಮನವನ್ನು ಮಾಡುವದಿದ್ದರೆ ಅವಳ ಸಭಾವ ಮುಂತಾದವುಗಳನ್ನು ಮೊದಲಿಗೆ ತಿಳಿದು ಕೊಳ್ಳಬೇಕು. ದೇಹದ ಮೇಲಿನ ಚಿನ್ಹಗಳಿಂದಲೂ ಅವನ್ನು ತಿಳಿಯ ಬಹುದು. ಲಕ್ಷಣಗಳಿಂದ ವ್ಯಭಿಚಾರಿಣಿಯನ್ನು ಗುರುತಿಸುವದು.

ಅಂಗುಷ್ಠಾದಿಕಾಗ್ರಾ ವಾಮಪದೆ ಸ್ಯಾತ್ಪ್ರದೇಶಿನೀ ಯಸ್ಯಾಃ।
ಹೀನಾಗ್ರಮಧ್ಯಮಾ ವಾ ಸ್ಪೃಶತಿ ನ ಭೂಮಿಂ ಕನಿಷ್ಠಾ ವಾ॥

ಯಾವ ಸ್ತ್ರೀಯಳ ಎಡಗಾಲ ಹೆಬ್ಬೆರಳಿನ ಹತ್ತಿರದ ಬೆರಳು, ಹೆಬ್ಬೆರಳಿನಕ್ಕಿಂತಲೂ ಉದ್ದವಿದೆಯೋ ಮತ್ತು ಯಾವಳ ಕಿರುಬೆರಳಿನ ಹತ್ತಿರದ ಬೆರಳು ಚಿಕ್ಕದು ಮತ್ತು ನಡು ಬೆರಳು ದೊಡ್ಡದಿದೆಯೋ, ಮತ್ತು ಯಾವಳ ಕಿರುಬೆರಳು ನಡೆಯುತ್ತಿರುವಾಗ ಭೂಮಿಗೆ ಹತ್ತುತ್ತಿಲ್ಲವೋ ಇಂಥ ಲಕ್ಷಣಗಳುಳ್ಳ ಸ್ತ್ರೀಯು ವ್ಯಭಿಚಾರಿಣಿಯಾಗುತ್ತಾಳೆ.

ತದನಂತರ ಯಾವ ಸ್ತ್ರೀಯಳ ಕಿರುಬೆರಳಿನ ಹತ್ತಿರದ ಮೊದಲಿನ ಎರಡು ಬೆರಳುಗಳು ಭೂಮಿಯ ಮೇಲೆ ಊರುವದಿಲ್ಲವೋ, ಯಾವಳು ಓರೆಗಣ್ಣಿನಿಂದ ನೋಡುತ್ತಾಳೋ ಯಾವಳು ಹಳದೀ ಕಂಡಿಸವಳಿದ್ದಾಳೊ ಯಾವಳು ಸುಮ್ಮಸುಮ್ಮನೇ ನಗುತ್ತಾಳೋ ಅಂಥವಳು ಸಾಮುದ್ರಿಕ ಶಾಸ್ತ್ರದಂತೆ ವ್ಯಭಿಚಾರಿಣಿಯೆಂದು ಎಣಿಸಲ್ಪಟ್ಟಿದ್ದಾಳೆ. ಸಾಮುದ್ರಿಕಶಾಸ್ತ್ರದ ನಾಲ್ಕನೇ ಅಧಿಕರಣದಲ್ಲಿ ೯ನೇ ಶ್ಲೋಕದಿಂದ ೨೬ನೇ ಶ್ಲೋಕದ ತನಕ ಬೆರಳಿನ ಲಕ್ಷಣಗಳನ್ನು ಹೇಳಲಾಗಿದೆ. ಅದರಲ್ಲಿ ಹೇಳುವದೇನೆಂದರೆ— ಯಾವಳ ಕಿರುಬೆರಳು ನೆಲಕ್ಕೆ ಹತ್ತುವದಿಲ್ಲವೋ ಅವಳು ಪತಿಯನ್ನು ಕೊಂದು ಏಕಾಂತದಲ್ಲಿ ಪರಪುರುಷನನ್ನು ಕೂಡುತ್ತಾಳೆ. ಯಾವಳ ಅನಾಮಿಕೆ (ಕಿರುಬೆರಳಿನ ಹತ್ತಿರದ್ದು) ಯದು ಈ ಅವಸ್ಥೆಯಾಗುತ್ತದೆಯೋ ಅವಳು ಇಬ್ಬರನ್ನೂ ಕೊಲ್ಲುತ್ತಾಳೆ. ಮತ್ತು ಈ ಬೆರಳು ಅತ್ಯಂತ ಚಿಕ್ಕದಿದ್ದರೆ ಕಲಹ ಪ್ರಿಯಳಾಗುತ್ತಾಳೆ. ಯಾವಳ ನಡುಬೆರಳು ಚಿಕ್ಕದಿದೆಯೊ ಅವಳು ನಿರಂತರವೂ ಪರಪುರುಷರ ವಿಷಯಕ್ಕೆ ಪುರುಷಾರ್ಥವನ್ನು ಮಾಡುತ್ತಿರುತ್ತಾಳೆ. ಹೇಗಿದ್ದು ಆ ಬೆರಳು ನೆಲಕ್ಕೆ ಹತ್ತದಿದ್ದರೆ ಮೂವರು ಪತಿಗಳನ್ನು ಅವಳು ಕೊಲ್ಲಬಹುದು. ಸಾಮುದ್ರಿಕ ಶಾಸ್ತ್ರಕ್ಕಾಧಾರವಾಗಿ ಕೋಕನು ಈ ಸಂಗತಿಗಳನ್ನು ಸಂಗ್ರಹಮಾಡಿದ್ದಾನೆ. ಅಲ್ಲದೆ ಯಾವಳ

ಬೆರಳುಗಳು ಬಡಕಲಾಗಿ ಮತ್ತು ಗಡುತರಾಗಿ ಅಂಕಡೊಂಡಾಗಿದ್ದು ಅವು ಒಂದರಮೇಲೊಂದು ಬೀಳುತ್ತಿದ್ದರೆ, ಅಂಥವಳು ಅನೇಕಾನೇಕ ಪತಿಗಳನ್ನೂ ಕೂಡ ಕೊಂದು ಕಡೆಗೆ ದಾಸಿಯಾಗುತ್ತಾಳೆ. ಯಾವಳು ನಡೆಯುತ್ತಿರುವಾಗ ನೆಲದಮೇಲಿನ ಮಂಣಿನ ಕಣಗಳನ್ನು ಮೇಲಕ್ಕೆ ತೂರುತ್ತಾಳೋ ಆ ವ್ಯಭಿಚಾರಿಣಿಯು ವಂಶವನ್ನೇ ನಾಶಮಾಡುತ್ತಾಳೆ. ಇದರಂತೆ ಸಾಮುದ್ರಿಕಶಾಸ್ತ್ರದಲ್ಲಿ ಇನ್ನೂ ಅನೇಕ ಲಕ್ಷಣಗಳನ್ನು ಹೇಳಲಾಗಿದೆ. ಆದರೆ, ಅವೆಲ್ಲವೂ ವಸ್ತ್ರಮುಚ್ಚಿದ ಅಂಗಗಳಲ್ಲಿರುವದರಿಂದ ಪ್ರಾರಂಭದಲ್ಲಿ ನೋಡಲಿಕ್ಕೆ ಸಿಗುವುದಿಲ್ಲ ಅದಕ್ಕಾಗಿ ಕೋಕನು ಕಾಲು ಬೆರಳುಗಳ ಲಕ್ಷಣಗಳನ್ನೇ ತಕ್ಕೊಂಡಿದ್ದಾನೆ. ಇದರ ಮೇಲೆ ವಾತ್ಸ್ಯಾಯನದ ಅಭಿಪ್ರಾಯವೇನು ?

ವ್ಯಭಿಚಾರಾಧಾಕೃತಿಲಕ್ಷಣಯೋಗಾನಾಮಿಂಗಿತಾಕಾರಾಭ್ಯಾಮೇವ ।
ಪ್ರವೃತ್ತಿರ್ಬೋದ್ಧವ್ಯಾಯೋಷಿತ ಇತಿ ವಾತ್ಸ್ಯಾಯನಃ ॥

ಇದರ ವಿಷಯಕ್ಕೆ ವಾತ್ಸ್ಯಾಯನನ ಮತವೇನಂದರೆ— ಸ್ತ್ರೀಯ ಶರೀರ ಮತ್ತು ಶರೀರ ಸ್ಥಾನದಲ್ಲಿ ಯಾವ ಚಿಹ್ನಗಳನ್ನು ನೋಡಲಾಗಿದೆಯೊ ಅವುಗಳಲ್ಲಿ, ವ್ಯಭಿಚಾರಿಣಿಯಾಗುವ ಕಾರಣಗಳನ್ನು ಇಂಗೀತ ಮತ್ತು ಆಕಾರಗಳಿಂದ ತಿಳಿದುಕೊಳ್ಳಬೇಕು. (ಪದ್ಮಿನಿ ಜಾತಿಯ ವೇಶ್ಯೆಯು ವ್ಯವಹಾರ ಹಾಗೂ ಪರಂಪರೆಯಿಂದ ಅನಿವಾರ್ಯವಾಗಿ ಸೂಳೆಯಾಗುವಂತೆ, ವ್ಯಭಿಚಾರಿಣಿಯಂತೆ ಕಾಲಿದ್ದ ಸ್ತ್ರೀಯೂ ಅಂಜಿಕೆಯಿಂದ ಅನಿವಾರ್ಯವಾಗಿ ಗರತಿಯಾಗುತ್ತಾರೆಂಬುದೇ ಇಲ್ಲಿ ವಾತ್ಸ್ಯಾಯನನದೂ ಅನುಭವವಿರಬೇಕು. ಅನು.)

ಆಕೃತಿ ಹಾಗೂ ಲಕ್ಷಣಯೋಗವಾದನಂತರವೂ ಶೀಲ, ಸತ್ಯ, ಮತ್ತು ಸೀತಿಮತ್ತೆಯ ಜ್ಞಾನವಾಗುವದಿಲ್ಲ; ಅವಳು ಸುಲಭ ಸಾಧ್ಯಳೋ ಅಥವಾ ದುಸ್ಸಾಧ್ಯಳೋ; ಮೃದು, ಮಧ್ಯಮ ಮತ್ತು ಚಂಡವೇಗಿ ಇದ್ದಾಳೋ ಈ ಮಾತಿನ ಜ್ಞಾನವೂ ಆಗುವದಿಲ್ಲ. ಅಂದಮೇಲೆ ಹೇಗೆ ನೋಡುವದು? ಇದಕ್ಕೆ ಉತ್ತರವನ್ನು ಕನ್ಯಾ ಸಂಪ್ರಯುಕ್ತಕದಲ್ಲಿ ಹೇಳಿದ ಇಂಗೀತ ಮತ್ತು ಆಕಾರಗಳಿಂದ ತಿಳಿದುಕೊಳ್ಳಬೇಕು. ಪ್ರವರ್ತನೆ

ಮಾಡುವದಕ್ಕೆ ಪ್ರವೃತ್ತಿಯೆನ್ನುತ್ತಾರೆ. ಇದರಲ್ಲಿ ಇಂಗಿತದ ಹೊರತಾಗಿ ಸ್ತ್ರೀಪುರುಷರ ಸತ್ಯ, ಶೀಲ ಮತ್ತು ನೀತಿ ಈ ಮೂರನ್ನು ಅವರ ಪ್ರವೃತ್ತಿಯಿಂದ ತಿಳಿದುಕೊಳ್ಳಬೇಕು. ಸ್ತ್ರೀಪುರುಷರಿಬ್ಬರ ಕಾಮವು ಜಾಜ್ವಲ್ಯವಾಗುವದು ಶೀಲದಿಂದ. ಇದಕ್ಕೆ ಶೀಲವೇ ಹೇಗೆ ಕಾರಣವೆಂಬುದನ್ನು ಮತ್ತು ಅವರಿಬ್ಬರಲ್ಲಿ ಯಾರ ಶೀಲವು ಹೇಗೆ ಇದೆಯೆಂಬುದನ್ನು ಮುಂದಿನಂತೆ ಹೇಳುತ್ತಾರೆ:—

**ಯಂ ಕಂಚಿದುಜ್ಜ್ವಲಂ ಪುರುಷಂ ದೃಷ್ಟ್ವಾ ಸ್ತ್ರೀ ಕಾಮಯತೇ । ತಥಾ ಪುರುಷೋಽಪಿ ಯೋಷಿತಮ್ । ಅಪೇಕ್ಷಯಾ ತು ನ ಪ್ರವರ್ತತೇ ಇತಿ ಗೋಣಿಕಾಪುತ್ರಃ ॥**

ವೇಷ, ಭೂಷಣ ಮತ್ತು ವರ್ಣದಿಂದ ಉಜ್ವಲ (ಆಕರ್ಷಕ)ನಾದ ಪುರುಷನನ್ನು ನೋಡಿ ಯಾವದೇ ಸ್ತ್ರೀಯಲ್ಲಿ ಆಕರ್ಷಣೆ ಹುಟ್ಟುತ್ತದೆ. ಇದರಂತೆ ಪುರುಷನಲ್ಲಿಯೂ ಕೂಡ ಇಂಥ ಸ್ತ್ರೀಯನ್ನು ನೋಡಿ ಆಕರ್ಷಣೆ ಹುಟ್ಟುತ್ತದೆ. ಆಕರ್ಷಣೆ ಹುಟ್ಟಿದರೂ ಕೂಡ ಒಬ್ಬರಿನ್ನೊಬ್ಬರಲ್ಲಿ ಪ್ರವೃತ್ತರಾಗುವದಿಲ್ಲ, ಹೀಗೆ ಪ್ರವೃತ್ತರಾಗುವವರು ಯಾರೂ ಒಬ್ಬರು. ಹೀಗಿದ್ದರೂ ಕೂಡ ಇದರಿಂದ ಸಿದ್ಧವಾಗುವದೇನೆಂದರೆ, ಇಬ್ಬರಲ್ಲಿಯೂ ನಾವಿನ್ಯತೆಯನ್ನು ನೋಡಿ ಆಕರ್ಷಣೆ ಹುಟ್ಟುತ್ತದೆ. ಇದು ಗಣಿಕಪುತ್ರನ ಅಭಿಪ್ರಾಯವಿದ್ದು, ಈ ವಿಷಯದಲ್ಲಿ ಅವನ ಪ್ರವೀಣತೆಯನ್ನು ತೋರಿಸುವದಕ್ಕಾಗಿ ಅದನ್ನಿಲ್ಲಿ ಹೇಳಲಾಗಿದೆ.

ಇದರಂತೆ ಸ್ತ್ರೀಪುರುಷರ ಸ್ವಭಾವಗಳು ಆಕರ್ಷಣೆಯ ದೃಷ್ಟಿಯಲ್ಲಿ ಒಂದೇ ಆದರೂ, ಅದರಲ್ಲಿ ಸ್ತ್ರೀಯರದು ಇನ್ನೂ ವಿಶೇಷವಿದೆ. ಆ ವಿಶೇಷತೆಗಳು ಏನೆಂಬುದನ್ನು ಇನ್ನು ಮುಂದೆ ಹೇಳಲಾಗುತ್ತದೆ.

**ನ ಸ್ತ್ರೀ ಧರ್ಮಮಧರ್ಮಂ ಚಾಪೇಕ್ಷತೇ ಕಾಮಯತ ಏವ । ಕಾರ್ಯಾಪೇಕ್ಷಯಾ ತು ನಾಭಿಯುಂಕ್ತೇ ॥**

ವಿಶೇಷತಃ ಸ್ತ್ರೀಯಲ್ಲಿ ಧಾರ್ಮಿಕ ಜ್ಞಾನವಿರುವದರಿಂದ ಅವಳು ಧರ್ಮಾಧರ್ಮಗಳನ್ನು ಪ್ರವೃತ್ತಿಗಾಗಿ ಲೆಕ್ಕಿಸುವದಿಲ್ಲ. ಆದರೆ ಸಮಾಗಮಕ್ಕೆ ಅವಕಾಶಕೊಟ್ಟರೆ ತನ್ನಲ್ಲಿ ಬೇರೆಯವರು ಏನಾದರೂ ದೋಷ

ಗಳನ್ನು ಕಂಡುಕೊಂಡಾರೆಂಬ ಭೀತಿಯಿದ್ದರೆ, ಸಮಾಗಮಕ್ಕೆ ಒಪ್ಪಿಗೆ ಕೊಡುವದಿಲ್ಲ. ಕಂಡುಕೊಳ್ಳಬಹುದಾದ ಈ ದೋಷಗಳೇ ಸ್ತ್ರೀಯರ ಶೀಲವು. ಪುರುಷನು ವಶಮಾಡಿಕೊಳ್ಳಲು ಉಪಾಯಗಳನ್ನು ಅಭಿಯೋಗಿಸುತ್ತಿದ್ದಾನೆ, ಅದನ್ನು ತಿಳಿದೂ ಅದು ತನಗೆ ಬೇಕೆನಿಸಿದರೂ, ತನ್ನಿಂದ ತಾನೇ ಸ್ವಭಾವತಃ ದೂರವಾಗುತ್ತಾಳೆ. ಆದಕ್ಕಾಗಿ ಒಂದೇ ಸವನೆ ಪ್ರಯತ್ನಮಾಡಿದರೆ ಸಿಗುತ್ತಾಳೆ, [ಅಂದರೆ, ತಮ್ಮ ಸಲುವಾಗಿ ಹಲ್ಲಲ್ಲಿ ಕಡ್ಡೀ ಕಚ್ಚಿ ಬೆನ್ನುಹತ್ತಿದರೇನೇ ಸ್ತ್ರೀಯರು ವಶರಾಗುತ್ತಾರೆಂದು ಅರ್ಥ. ಅನು.)

ಪುರುಷನಾದರೋ ಧರ್ಮಬಂಧನ ಮತ್ತು ಶಿಷ್ಟರ ಆಚಾರ ವಿಚಾರಗಳನ್ನು ನೋಡಿ ಆಕರ್ಷಣೆ ಹುಟ್ಟಿದರೂ ದೂರವಾಗುತ್ತಾನೆ. ಇಂಥ ಬುದ್ಧಿಶಕ್ತಿಯಿದ್ದ ಪುರುಷನು ಪ್ರಯತ್ನಮಾಡಿದ್ದರೂ ಕೂಡ ಯಾರೂ ಸಿಕ್ಕುವದಿಲ್ಲ.

ಪುರುಷನು ತನ್ನ ಪ್ರವೃತ್ತಿಯಲ್ಲಿ ಸುಖ ಅಥವಾ ಇನ್ನಿತರ ಕಾರಣಗಳಿಗಾಗಿ ಪರಸ್ತ್ರೀ ಸಂಗಮಾಡುವದಕ್ಕಾಗಿ ಉಪಾಯಗಳನ್ನು ಮಾಡಹತ್ತುತ್ತಾನೆ. ಉಪಾಯ ಯೋಜನೆಯ ನಂತರ ಪ್ರಾಪ್ತಳಾದರೂ ಕೂಡ ಸಿಕ್ಕುವದಿಲ್ಲ. ಏಕೆಂದರೆ ಅವನು ಸಿಕ್ಕಬಹುದಾದ ಕಾರಣಗಳ ವಿಷಯಕ್ಕೆ ವಿಚಾರವನ್ನೇ ಮಾಡಿರುವದಿಲ್ಲ ಅವನಿಗೆ ಬೇಕಿದ್ದದ್ದು ಸ್ವಾರ್ಥರಹಿತ, ನಿಷ್ಕಾಮ ಹಾಗೂ ಶುದ್ಧ ಸ್ತ್ರೀಯು. ಪರಸ್ತ್ರೀಯು ಒಪ್ಪಿದರೂ ಕೂಡ ಉದಾಸೀನನಾಗಿ ಬಿಡುತ್ತಾನೆ. ಏಕೆಂದರೆ ಕೇವಲ ಉಪಾಯಯೋಜನೆಗಳಷ್ಟನ್ನೇ ಮಾಡಿ ಸಹವಾಸವನ್ನು ಮಾಡುವದಿಲ್ಲ. ಇದು ಅವನ ಸ್ವಭಾವ.

**ಸುಲಭಾಮವನ್ಯತೆ ದುರ್ಲಭಾಮಾಕಾಂಕ್ಷತ ಇತಿ ಪ್ರಾಯೋವಾದಃ ॥**

ಸುಲಭಸಾಧ್ಯಳನ್ನು ಅನಾದರಿಸಿ ಅಪಮಾನಮಾಡುವದೂ, ದುಸ್ಸಾಧ್ಯಳನ್ನು ಆದರಿಸಿ ಮನ್ನಿಸುವದೂ ಪುರುಷನ ಸ್ವಭಾವವದೆ.

## ವ್ಯಾವರ್ತನ ಕಾರಣಾನಿ ಪ್ರಕರಣಂ

ಹಿಂದಿನ ಪ್ರಕರಣದಲ್ಲಿ ಸ್ತ್ರೀಪುರುಷರ ಶೀಲಾದಿಗಳ ವಿವರಣೆಯನ್ನು ಮಾಡುತ್ತಿರುವಾಗ ಸ್ತ್ರೀಯರಲ್ಲಿನ ಕೆಲವು ದೋಷಗಳನ್ನು ಹೇಳ

ಲಾಯಿತು. ಆ ದೋಷಗಳನ್ನು ಹೇಗೆ ದೂರಮಾಡಬೇಕೆಂಬುವ ಪ್ರಕರಣ ವನ್ನು ಸೂತ್ರಕಾರರು ಇಲ್ಲಿ ಪ್ರಾರಂಭಮಾಡುತ್ತಾರೆ.

ಪತಿಯ ಸಹವಾಸ ಮತ್ತು ಪ್ರೇಮ, ಮಕ್ಕಳ ಅಪೇಕ್ಷೆ, ವೃದ್ಧಾಪ್ಯ ಮತ್ತು ದುಃಖ ಇವು ಸ್ತ್ರೀಯನ್ನು ಪರಪುರುಷಾಪೇಕ್ಷೆಯ ದೋಷದಿಂದ ದೂರಮಾಡುತ್ತವೆ.

**ಪತ್ಯಾವನುರಾಗೋ ವ್ಯಾವೃತ್ತಿಕಾರಣಂ ಪ್ರತ್ಯಸ್ನಾಯಾಮಪೇಕ್ಷಾಯಾಮ್ ॥**

ಬೇರೆಯವರನ್ನು ಕೂಡಬೇಕೆಂದು ಇಚ್ಛೆಯಾಗುತ್ತಿದ್ದರೂ ಪತಿಯ ಮೇಲಿಟ್ಟ ಪ್ರೇಮವು ಹಾಗೆ ಪ್ರವೃತ್ತಳಾಗಲು ತಡೆಯನ್ನುಂಟುಮಾಡುತ್ತದೆ.

**ಅಪತ್ಯಾಪೇಕ್ಷಿತಿ-ಸ್ತನಧಯಂ ಮಮಾಪತ್ಯಮಿತಿ ॥**

ನನ್ನ ಮಗುವು ಉಡಿಯಲ್ಲಿದ್ದು ಇನ್ನೂ ಹಾಲು ಕುಡಿಯುತ್ತದೆ, ಅದು ಹೀಗಿರುವಾಗ ನಾನು ಇಂಥ ಕೆಲಸವನ್ನು ಹೇಗೆ ಮಾಡಲಿ? ಎಂಬುವ ಶಂಕೆಯೂ ಅದನ್ನು ತಡೆಹಿಡಿಯುತ್ತದೆ.

**ಅತಿಕ್ರಾಂತವಯಸ್ತ್ವಮಿತಿ ಪರಿಭೂತತಯಾ ಲಜ್ಜತೆ ಬಲಾತ್ಪರ-ಪುರುಷಾಣಾಮುಂಗಾರ್ಪಣೇನೇತಿ ॥**

ಯಾವಳ ವಯಸ್ಸು ದಾಟಿಹೋಗಿ ವೃದ್ಧಳಾಗಿರುತ್ತಾಳೋ ಅಂಥವಳು ಬಲಾತ್ಕಾರದಿಂದಲಾದರೂ ಕೂಡ ತನ್ನ ಶರೀರವನ್ನು ಸ್ವಾಧೀನ ಮಾಡುವಾಗ ನಾಚುತ್ತಾಳೆ.

**ದುಃಖಾಭಿಭವಃ ॥**

ಯಾವಳು ದುಃಖದಿಂದ ಜರ್ಜರಳಾಗಿರುವಳೋ ಮತ್ತು ಯಾವಳು ಪ್ರಿಯ ಜನರ ವಿಯೋಗದಿಂದ ದುಃಖಸಾಗರದಲ್ಲಿ ಮುಳುಗಿರುತ್ತಾಳೋ ಅಂಥವಳು ಇಚ್ಛೆಯಾಗುತ್ತಿದ್ದರೂ ಕೂಡ ತಡೆಹಿಡಿಯುತ್ತಾಳೆ.

ವಿರಹಾನುಪಲಂಭಃ ॥

ಯಾವಳಿಗೆ ಪತಿವಿಯೋಗವಾಗಿಲ್ಲವೋ ಮತ್ತು ಯಾವಳ ಪತಿಯು ಸದಾ ಹತ್ತಿರ ಇರುತ್ತಾನೋ ಅಂಥವಳೂ ಕೂಡ ಸಿಗುವದಿಲ್ಲ.

ತನ್ನನ್ನು ಅಪಮಾನಗೊಳಿಸುವ ಉದ್ದೇಶದಿಂದ ಉಪಾಯ ಯೋಜನೆಯನ್ನು ಮಾಡುತ್ತಿದ್ದಾನೆಂಬುವ ಭೀತಿ ಹುಟ್ಟಿದರೆ ಅದರಿಂದಲೂ ಸಿಗುವದಿಲ್ಲ. ಅವನು ದುಸ್ಸಾಧ್ಯನೆಂಬುವ ಕಲ್ಪನೆಯಾದರೆ ಅವನ ಪ್ರಾಪ್ತಿಯ ವಿಷಯದ ಸಂಕಲ್ಪವನ್ನು ಬಿಡುತ್ತಾಳೆ. ತನಗೆ ಸಿಕ್ಕರೂ ಅನ್ಯಕಡೆಗೆ ಆಸಕ್ತನಾಗಿ ತನ್ನನ್ನು ಬಿಟ್ಟುಕೊಟ್ಟಾನೆಂಬುವ ಶಂಕೆಯಿದ್ದರೂ ವಶರಾಗುವದಿಲ್ಲ. ಅಥವಾ ತಾನು ಇವನ ಜತೆಗೆ ಬಲುದಿನಗಳ ತನಕ ಕೂಡಿಕೊಂಡಿರಲು ಶಕ್ಯವಿಲ್ಲ, ಏಕೆಂದರೆ ಇವನು ಬೇರೆ ಕಡೆಗೆ ಆಸಕ್ತನಾಗಿದ್ದಾನೆ, ಇವನ ಈಗಿನ ಆಶ್ವಾಸನೆಗಳೆಲ್ಲವೂ ಕ್ಷಣಿಕ, ಭವಿಷ್ಯತ್ತಿನಲ್ಲಿ ನನ್ನ ಕಡೆಗೆ ಇರಲಿಕ್ಕಿಲ್ಲವೆಂಬ ಶಂಕೆಯಿಂದಲೂ ವಶರಾಗುವದಿಲ್ಲ. ಇವನು ಮಾತಿನಮಲ್ಲ, ತನ್ನ ವಿಷಯದ ಸಂಗತಿಗಳನ್ನೆಲ್ಲ ಸ್ನೇಹಿತರಲ್ಲಿ ಡಂಗುರ ಹೊಡೆಯುತ್ತ ತಿರುಗಬಹುದೆಂಬುವ ಶಂಕೆಯಿಂದಲೂ ವಶರಾಗುವದಿಲ್ಲ. ಏಕೆಂದರೆ ಇವನು ತನ್ನ ಮಿತ್ರರ ಸಲಹೆಯಿಂದಲೇ ವರ್ತಿಸುತ್ತಾನಲ್ಲದೆ ತನ್ನಲ್ಲಿ ಅನಾದರವನ್ನೂ ತೋರಿಸುತ್ತಾನೆ ಎಂಬುವ ಶಂಕೆಹುಟ್ಟುತ್ತದೆ. ಸುಮ್ಮಸುಮ್ಮನೇ ಉಪಾಯಗಳನ್ನಭಿಯೋಗಿಸುತ್ತಿದ್ದಾನೆ ಎಂಬುವ ಶಂಕೆಯಿಂದಲೂ ವಶರಾಗುವದಿಲ್ಲ.

ಪ್ರಭಾವಶಾಲಿ, ನಾಗರಿಕ, ಮೃಗಿ ಮತ್ತು ಮಿತ್ರತ್ವದ ಶಂಕೆ:

ಪ್ರಭಾವಶಾಲಿಯಾದ ವ್ಯಕ್ತಿತ್ವವಿದೆ, ಎಂದಾದರೂ ಏನಾದರೂ ತಪ್ಪುತಡೆಯಾದರೆ ಅದು ಅವನಿಗೆ ಎಳ್ಳಷ್ಟೂ ಸಹಿಸಲಿಕ್ಕಿಲ್ಲವೆಂಬ ಶಂಕೆಯಿಂದಲೂ ವಶರಾಗುವದಿಲ್ಲ. ಮೃಗಿ ಇಲ್ಲವೆ ಚಿಕ್ಕ ಶರೀರ (ದೇಹದಾಕಾರ) ದ ಸ್ತ್ರೀಪುರುಷರಿಗೆ ಚಂಡ-ಪ್ರಚಂಡ ಇಲ್ಲವೆ ದೊಡ್ಡದಾದ ಆಕಾರವನ್ನು ನೋಡಿ ಅದರಿಂದ ಭೀತಿಯುತ್ಪನ್ನವಾಗಿಯೂ ವಶರಾಗುವದಿಲ್ಲ. ಇವನು ನಾಗರಿಕನಿದ್ದಾನೆ, ಸಕಲ ಕಲೆಗಳಲ್ಲಿ ನಿಷ್ಣಾತನಿದ್ದಾನೆ; ನಾನು ಹಳ್ಳಿಯವಳು ಕಲಾ-ಕೌಶಲ್ಯಗಳ ಗಂಧವೂ ಇಲ್ಲ; ಆದರೆ, ಈ ಪುರುಷ

ನಾದರೋ ಅವುಗಳಲ್ಲಿ ಪರಿಪೂರ್ಣನಿದ್ದಾನೆ, ಎಂಬುವ ಶಂಕೆಯಿಂದಲೂ ವಶರಾಗುವದಿಲ್ಲ.

ನಾನು ಈವರೆಗೆ ಇವನ ಕೂಡ ಮೈತ್ರಿಣಿಯಂತೆ ನಡೆಯುತ್ತಬಂದಿದ್ದೇನೆ, ಆದರೆ ಈಗ ಇವನ ಕೂಡ ಇದರಂತೆ ಹೇಗೆ ಮಾಡಲಿ? ಎಂದು ನಾಚಿಕೆಯಿಂದಲೂ ತಡೆಯಾಗುತ್ತದೆ.

ಅಜ್ಞಾತೆ, ಅಪಮಾನ, ಮೂರ್ಖ ಮತ್ತು ಚಿಕ್ಕವ ಇಲ್ಲವೆ ಅನಿಷ್ಟತೆಗಳ ಶಂಕೆ:

ಇವನು ಕಾಲಮಾನ ಪರಿಸ್ಥಿತಿಗಳನ್ನಾಗಲೀ, ದೇಶದ ರೀತಿ-ನೀತಿಗಳನ್ನಾಗಲೀ ನೋಡದೇ ಉಪಾಯ ಯೋಜನೆಯನ್ನು ಮಾಡುತ್ತಿದ್ದಾನೆಂಬುವದನ್ನು ನೋಡಿ ತಿರಸ್ಕಾರದಿಂದ ಆಶೆಯನ್ನು ಬಿಟ್ಟುಬಿಡುತ್ತಾಳೆ. ಇವನು ನೀಚನಿದ್ದಾನೆ ಇವನ ಜತೆಗೆ ಸಹವಾಸಮಾಡಿದ್ದು ಕೇಳಿದರೆ ನನ್ನ ಸಖಿಯರು ನನ್ನನ್ನು ನೀತಿ-ನಿಯಮಗಳನ್ನು ಬಿಟ್ಟು ತಿರಸ್ಕರಿಸುತ್ತಾರೆಂಬುವ ಭಯದಿಂದಲೂ ವಶಳಾಗುವದಿಲ್ಲ.

ನಾನು ಇವರಿಗೆ ಸಂಜ್ಞೆಯಿಂದ ನನ್ನ ಅಭಿಪ್ರಾಯವನ್ನು ಸೂಚಿಸಿದೆ ಆದರೆ ಮೂರ್ಖನಾದ ಇವನಿಗೆ ಅವುಗಳ ಇಂಗಿತದ ಜ್ಞಾನವಾಗಲಿಲ್ಲ ಎಂಬುವ ತುಚ್ಛತೆಯಿಂದಲೂ ದೂರವಾಗಬಹುದು.

ಹಸ್ತಿನಿ ಜಾತಿಯವಳಿದ್ದುದರಿಂದ ಶರೀರವೂ ದೊಡ್ಡದಿದೆ ಅದರಂತೆ ಅವಳು ಪ್ರಚಂಡವೇಗಳೂ ಇದ್ದುದರಿಂದ ಶಶಜಾತಿಯ ಪುರುಷನು ಮಂದಕಾಮಿ ಇರುತ್ತಾನಲ್ಲದೆ ಆವನ ಲಿಂಗವೂ ಚಿಕ್ಕದಿರುತ್ತದೆ, ಆದರಿಂದಲೂ ದೂರವಾಗಬಹುದು.

ಇವನು ನನ್ನನ್ನು ಸಮಾಗಮಿಸುವದರಿಂದ ಇವನಿಗೆ ಏನಾದರೂ ಕೇಡಾಗಲಿಕ್ಕಿಲ್ಲವೇ, ಇವನ ಧನವು ಹಾಳಾಗಲಿಕ್ಕಿಲ್ಲವೇ, ಅದರಂತೆ ಶರೀರಕ್ಕೂ ಅಪಾಯವಾಗಲಿಕ್ಕಿಲ್ಲವೇ ಎಂಬುವ ಅಂತಃಕರುಣದಿಂದಲೂ ಗುಣಾಢ್ಯ ಸ್ತ್ರೀಯು ದೂರವಾಗಬಹುದು.

ಸ್ವದೋಷ ಹಾಗೂ ಸ್ವಕೀಯರ ಅಂಜಿಕೆ:

ಸ್ತ್ರೀಯಳ ಶರೀರದಲ್ಲಿ ಜಡ್ಡಿನಿಂದ ಏನಾದರೂ ಊನವಾಗಿದ್ದರೆ ಇಲ್ಲವೆ ದೇಹಯಷ್ಟಿಯೂ ಅದುವಾಗಿದ್ದರೆ ಅವಳು ತಾನಾಗಿಯೇ ವ್ಯಭಿಚಾರದಿಂದ ದೂರವಾಗುತ್ತಾಳೆ.

ಆದರೆ, ಇದರ ಪತ್ತೆ ಸಿಕ್ಕಿದರೆ; ವ್ಯಭಿಚಾರಿಣಿಯಿದ್ದಾಳೆಂದು ಮನೆಯವರು ಮನೆಬಿಟ್ಟು ಹೊರಗೆ ಹಾಕಬಹುದು ಎಂಬುವ ಭೀತಿಯಿಂದಲೂ ದೂರವಾಗಬಹುದು.

ವೃದ್ಧ ಇಲ್ಲವೆ ಪತಿಯಿಂದ ಪ್ರೇರಣೆಯಾದ ಶಂಕೆ:

ಉಪಾಯ ಯೋಜನೆಯನ್ನು ಮಾಡುವವನು ವೃದ್ಧನಿದ್ದಾನೆ, ಅವನು ನನಗೆ ತಕ್ಕವಲ್ಲ, ಎಂಬುವ ಅನಾದರ ದೃಷ್ಟಿಯಿಂದಲೂ ದೂರವಾಗಬಹುದು.

ತನ್ನ ಪತಿಯೇ ತನ್ನ ನಡವಳಿಕೆಯನ್ನೂ ತಾನು ಪ್ರತಿವ್ರತೆಯಹುದೋ ಅಲ್ಲವೋ ಎಂಬುದನ್ನೂ ನೋಡುವಕ್ಕಾಗಿ ಕಲಿಸಿ ಕಳಿಸಿರಲಿಕ್ಕಿಲ್ಲವೇ? ಎಂಬುವ ಭೀತಿಯಿಂದಲೂ ದೂರವಾಗಬಹುದು.

ಧರ್ಮಾಧರ್ಮಗಳ ಸಂಕೆಯಿಂದ:

ಧರ್ಮದೃಷ್ಟಿಯಿಂದಲೂ ಪರಪುರುಷನನ್ನು ದೂರಮಾಡುವ ಕಾರಣವಿದೆ. ಹಲಕೆಲವು ಸ್ತ್ರೀಯರು ಧರ್ಮವೆಂದು ತಿಳಿದೇ ಪತಿಸೇವೆಯನ್ನು ಮಾಡುತ್ತಾರೆ. ಆದರಂತೆ ಅದರ್ಮವೆಂದು ತಿಳಿದೇ ಪರಪುರುಷರ ವಿಚಾರಗಳನ್ನು ತಮ್ಮ ಮನದಿಂದಲೂ ದೂರಮಾಡುತ್ತಾರೆ.

ಕಾರಣಗಳಿಗೆ ಪ್ರತಿಕಾರ:

ಈ ಕಾರಣಗಳ ವಿಷಯವಾಗಿ ಪರಸ್ತ್ರೀಯರ ಸಲುವಾಗಿ ಉಪಾಯ ಮಾಡುವವರು ಏನು ಮಾಡಬೇಕು ಎಂಬುದನ್ನು ಮುಂದೆ ಹೇಳಲಾಗುತ್ತದೆ:—

ಸ್ತ್ರೀಯು ದೂರವಾಗಬಹುದಾದ ಈ ಕಾರಣಗಳಲ್ಲಿ ತನ್ನ ವಿಷಯಕ್ಕೆ ಯಾವ ಕಾರಣವು ಅಡ್ಡ ಬರುತ್ತದೆಯೋ ಆ ದೋಷವನ್ನು ಮೊದಲಿಗೆ ಪ್ರತಿಬಂಧವಾಗದಂತೆ, ತೆಗೆದುಹಾಕಬೇಕು.

ದೂರವಾಗುವ ಯಾವ ಕಾರಣವು ತನ್ನ ಹಾಗೂ ಇಸ್ತ್ರೀಬರ ಮಧ್ಯ ದಲ್ಲಿ ಬಂದಿದೆಯೋ ಅದನ್ನು ಉಪಾಯಗಳಿಂದ ದೂರಮಾಡಬೇಕು. ಈ ಉಪಾಯಗಳನ್ನು ಹೇಳುತ್ತಾರೆ. ಪ್ರತಿಬಂಧದಿಂದ ಸ್ತ್ರೀಯು ಎಲ್ಲವನ್ನೂ ಆಶಿಸುತ್ತಿದ್ದರೂ ಕೂಡ ದೂರವಾಗುತ್ತಿರುತ್ತಾಳಾದುದರಿಂದ, ಇದರ ಕಾರಣವಾಗಿ ಎಲ್ಲಕ್ಕೂ ಮೊದಲು ಇದರ ಪ್ರತಿಕಾರೋಪಾಯಗಳನ್ನು ಹೇಳಲಾಗುವದು.

ಶ್ರೀಷ್ಠತೆಯಿಂದ ಆಗುತ್ತಿರುವದಕ್ಕೆ ಪ್ರೇಮವನ್ನು ವೃದ್ಧಿಸಿ ದೂರ ಮಾಡಬೇಕು. ಅಂದರೆ, ಪತಿಯ ಮೇಲಿನ ಪ್ರೀತಿ, ಬಗಲಲ್ಲಿ ಮಕ್ಕಳು, ವೃದ್ಧಾಪ್ಯ, ದುಃಖದಿಂದ ಕಂಗಾಲಾದದ್ದು ಮತ್ತು ಧರ್ಮದ ಜ್ಞಾನದ ಕಾರಣವಾಗಿ ಹೀಗೆ ಮಾಡುವದು ಅಧರ್ಮವೆಂದು ಕಲ್ಪನೆಯಿದ್ದರೆ, ಇವು ಸ್ತ್ರೀಯರಲ್ಲಿ ಆಗಬಹುದಾದ ಶ್ರೀಷ್ಠತೆಗಳಿವೆ. ಈ ಕಾರಣಗಳಿಗಾಗಿ ತನ್ನ ಕಡೆಗೆ ಒಲಿಯುತ್ತಿರುವ ಸ್ತ್ರೀಯು ಕಲೆಯುವದಿಲ್ಲವೋ ಆಗ, ಅವರಲ್ಲಿ ಹೇಗೆ–ಹೇಗೆ ಪ್ರೇಮವು ಹೆಚ್ಚುತ್ತ ಹೋಗುತ್ತದೆಯೋ ಅದರಂತೆ ಆ ಶ್ರೀಷ್ಠತೆಯು ದೂರವಾಗುತ್ತದೆ.

**ಅಶಕ್ತಿಯಿಂದ ಆಗಿರಬಹುದಾದುದಕ್ಕೆ ಉಪಾಯ.** ಅಶಕ್ತಿ ಯಿಂದ ದೂರವಾಗುತ್ತಿದ್ದರೆ ಅದಕ್ಕೆ ಉಪಾಯಗಳನ್ನು ಹೇಳಿ ಅದನ್ನು ದೂರಮಾಡಬೇಕು. ಸ್ತ್ರೀಯು ಯಾವುದಾದರೂ ದುಷ್ಟರೋಗದಿಂದ (ಸಾಂಸರ್ಗಿಕ) ಬಳಲುತ್ತಿದ್ದು ದುರ್ಗಂಧಳಿದ್ದರೆ ಅವಳ ಆ ರೋಗ ಹಾಗೂ ದುರ್ಗಂಧವನ್ನು ದೂರಮಾಡಬೇಕು. ಒಟ್ಟಿನಮೇಲೆ ತನ್ನ ಹಾಗೂ ಅವಳ ಅಸಮರ್ಥತೆಯಿಂದ ಸಂಯೋಗವು ಅಸಾಧ್ಯವಿದ್ದರೆ ಆ ಅಸಮರ್ಥತೆ ಯನ್ನು ದೂರಮಾಡುವದಕ್ಕಾಗಿ ಉಪಾಯ ಯೋಜನೆಗಳನ್ನು ಮಾಡ ಬೇಕು.

**ಬಹುಮಾನದಿಂದ ಆಗುವದಕ್ಕೆ ಉಪಾಯ.** ಯಾವಾಗ ನಾಯಿ ಕೆಯ ಮನಸ್ಸಿನಲ್ಲಿ ಇವನು ನನಗೆ ಸಿಕ್ಕುವದು ಕಠಿಣ. ಏಕೆಂದರೆ ಇವನು ನಾಗರಿಕನಿದ್ದಾನಲ್ಲದೆ ಅಸಾಧಾರಣನೂ ಕಾಮಕಲೆಗಳಲ್ಲಿ ಅತ್ಯಂತ ನಿಷ್ಣಾತ ನಿದ್ದಾನೆ, ಆದರೆ ನಾನು ಅದರಂತೆಯಿಲ್ಲ. ಮಿತ್ರನೆಂದು ಇಲ್ಲಿಯ ತನಕ ತಿಳಿಯುತ್ತ ಬಂದು ಈಗ ಅನ್ಯ ದೃಷ್ಟಿಯಿಂದ ಹೇಗೆ ನೋಡಲಿ? ನನ್ನ

ಪತಿಯೇ ಪರೀಕ್ಷಿಸುವದಕ್ಕಾಗಿ ಕಳಿಸಿರಲಿಕ್ಕಿಲ್ಲವಷ್ಟೇ? ಎಂದು ಕಲ್ಪನೆಯಾಗಿ ದೂರವಾಗುತ್ತಿದ್ದರೆ ಆಗ ಪರಿಚಯವನ್ನು ಹೆಚ್ಚಿಸಿ ಅದನ್ನು ಹೋಗಲಾಡಿಸ ಬೇಕು. ಏಕೆಂದರೆ ಬಹುಮಾನದಿಂದ ದೂರವಾಗುವದನ್ನು ಪರಿಚಯ ವೃದ್ಧಿಯಿಂದ ದೂರಮಾಡಬಹುದು, ಅತಿ ಪರಿಚಯದಿಂದ ಮಾನ-ಸನ್ಮಾನಗಳು ಇಲ್ಲದಾಗುತ್ತವೆ.

**ಅನಾದರದಿಂದ ಉತ್ಪನ್ನವಾಗುವದಕ್ಕೆ ಉಪಾಯ.** ಇವನು ಒಣ ಉಪಾಯಗಳು ಮಾಡುತ್ತಾನೆ, ದೇಶ-ಕಾಲಗಳ ಅರಿವಿಲ್ಲ, ಹೇಯ ವಾದ ಕೆಲಸವನ್ನು ಮಾಡುತ್ತಿರಬಹುದೇ-ಅಥವಾ, ನೀಚನಿದ್ದುದರಿಂದ ಅನಾದರದಿಂದ ನೋಡಬೇಕಾಗುತ್ತದೆಯೇ? ಸಂಜ್ಞೆಗಳ ಇಂಗಿತಾರ್ಥ ವನ್ನು ತಿಳಿದುಕೊಳ್ಳುವದಿಲ್ಲ, ಮುದುಕನಾಗಿಬಿಟ್ಟಿದ್ದಾನೆ. ಎಂದು ಮುಂತಾದವುಗಳ ಸಲುವಾಗಿ ಅಪಮಾನಭಯದಿಂದ ದೂರಳಾಗುತ್ತಿದ್ದರೆ, ಆ ರೋಗವನ್ನು ಅಪಮಾನದ ಭಾವನೆಗಳನ್ನು ತ್ಯಜಿಸುವಂತೆ ಸ್ವಚ್ಛವಾಗಿ ಅಂದರೆ, ಕಾಮಶಾಸ್ತ್ರದಲ್ಲಿನ ಕಲೆಗಳ ಪ್ರದರ್ಶನ ಮಾಡುವದರಿಂದ ದೂರ ವಾಗುತ್ತವೆ. ತನ್ನನು ಅಪಮಾನಗೊಳಿಸುವ ಉದ್ದೇಶಕ್ಕಾಗಿಯೇ ಇವನು ನನಗೆ ಗಂಟುಬಿದ್ದಿದ್ದಾನೆ, ಗೌಪ್ಯವನ್ನೇ ಕಾಪಾಡಲು ಶಕ್ಯನಲ್ಲ, ತನ್ನ ಮಿತ್ರರರಲ್ಲಿ ಎಲ್ಲವನ್ನೂ ಹೇಳಿಬಿಡುವಂಥವನಿದ್ದಾನೆ; ಈ ಮಾತುಗಳನ್ನು ಮನಸ್ಸಿನಲ್ಲಿ ತಂದುಕೊಂಡು ಅಪಮಾನಭಯದಿಂದ ಯಾವ ಪರಸ್ತ್ರೀಯು ತನ್ನಿಂದ ದೂರವಾಗುತ್ತಾಳೋ ಅಂಥವಳನ್ನು ತನ್ನ ಏಕಾಂತ ಪ್ರಿಯತೆಯ ಅವಶ್ಯಕತೆಯನ್ನು ಪ್ರದರ್ಶಿಸಿ ವಶಮಾಡಿಕೊಳ್ಳಬೇಕು.

**ಭಯನಿವಾರಣ** ಇವನು ತೇಜಸ್ವಿಯಿದ್ದಾನೆ, ಅಶ್ವಜಾತಿಯವ ನಾದುದರಿಂದ ಚಂಡವೇಗನೂ ಇದ್ದಾನೆ, ಸಮರ್ಥನಿದ್ದಾನೆ, ಶಶಜಾತಿ ಯವನಿದ್ದುದರಿಂದ ಮಂದವೇಗಿಯಿದ್ದಾನೆ, ಅನ್ಯರಿಗೆ ತಿಳಿದರೆ ಸ್ವಜನರಿಂದ ಬಹಿಷ್ಕೃತಳಾಗಬಹುದು. ಎಂದು ಮುಂತಾದ ಭಯಗಳನ್ನು ಮನಸ್ಸಿನಲ್ಲಿ ಕಲ್ಪಿಸಿಕೊಂಡು ಯಾವಳಿಗೆ ಆಕಾಂಕ್ಷೆಯಿದ್ದೂ ದೂರವಾಗುತ್ತಾಳೋ ಅವ ಳಿಗೆ ಆ ಭಯನಿವಾರಣೆಯಾಗುವ ಉಪಾಯಗಳನ್ನು ಹೇಳಿ ತಮ್ಮ ಕಾರ್ಯ ಸಿದ್ಧಿಮಾಡಿಕೊಳ್ಳಬೇಕು.

ಇವಳು 'ತನ್ನಿಂದ ದೂರವಾಗುವ ಕಾರಣ'ವೆಂಬ ನಾಲ್ವತ್ತನೆಯ ಪ್ರಕರಣ ಸಮಾಪ್ತ.

# ಸ್ತ್ರೀಯರ ವಿಷಯಕ್ಕೆ ಸಿದ್ಧಪುರುಷರ ಪ್ರಕರಣ

ಹಿಂದೆ ಹೇಳಿದ ರೀತಿಗಳನ್ವಯ ಶೀಲದ ಸಿಶ್ಚಯವನ್ನು ಮಾಡಿಕೊಂಡು, ತಾನು ಇದರಲ್ಲಿ ಸಿದ್ಧನಾಗುತ್ತೇನೋ ಇಲ್ಲವೋ ಎಂಬುದನ್ನು ನೋಡಬೇಕು. ಈ ಮಾತನ್ನು ವಿಚಾರಿಸಿದ ವಿನಃ ಉಪಾಯವು ಅಸಂಭವವಿದೆ. ಅದಕ್ಕಾಗಿ ಯಾವ ಪುರುಷನು ಯಾವ ಸ್ತ್ರೀಯಲ್ಲಿ ಸಿದ್ಧಹಸ್ತನಾಗುತ್ತಾನೆಂಬುದನ್ನು ಮುಂದೆ ಹೇಳುತ್ತಾರೆ:—

ಮೊದಲಿಗೆ ದೋಷಗಳನ್ನು ತೋರಿಸಿದ ಪುರುಷರು ಸ್ತ್ರೀಯರಲ್ಲಿ ಸಿದ್ಧಹಸ್ತರಾಗುತ್ತಾರೆ. ೧) ಕಾಮಶಾಸ್ತ್ರಪಾರಂಗತನು, ೨) ಕಥೆ ಆಖ್ಯಾಯಿಕೆಗಳಲ್ಲಿ ಚತುರ, ೩) ಬಾಲ್ಯದಿಂದಲೂ ಒಡನಾಡಿ, ೪) ತುಂಬು ಜೌವನ, ೫) ಆಟಪಾಟಗಳ ಬಗ್ಗೆ ವಿಶ್ವಾಸಹುಟ್ಟಿಸಿದವ, ೬) ಸಮಯೋಚಿತವಾಗಿ ಮಾತನಾಡುವವ, ೭) ಪತ್ರಚ್ಛೇದ ಮುಂತಾದವುಗಳನ್ನು ಮಾಡುವವ, ೮) ಬೇಡಿದ ವಸ್ತುಗಳನ್ನು ತಂದುಕೊಡುವವ, ೯) ಸೇವಕಾಗ್ರಣಿ, ೧೦) ಅಂದವಾದ ವಸ್ತುಗಳನ್ನು ಬಯಸುವವ, ೧೧) ವೈತ್ರಿಣಿಯನ್ನು ಗುಪ್ತವಾಗಿ ಭೆಟ್ಟಿಯಾದವ, ೧೨) ಸ್ತ್ರೀಯರಲ್ಲಿ ಕುತೂಹಲ ಹುಟ್ಟಿಸುವವ, ೧೩) ಜತೆಗೆ ಬೆಳೆದವ, ೧೪) ಕಾಮುಕನಾದ ನೆರೆಯವ (ನೆರೆಮನೆಯವ), ೧೫) ಅಂಥವನೇ ಸೇವಕ, ೧೬) ದಾಸೀ ಪುತ್ರ, ೧೭) ಹೊಸ ಅಳಿಯ, ೧೮) ನಾಟಕ ತಮಾಸೆಗಳನ್ನು ನೋಡುವವ, ೧೯) ತ್ಯಾಗಿ, ೨೦) ವೀರಾಧಿವೀರ ೨೧) ಅರಿಯದೇ ಅಕಸ್ಮಾತ್ತಾಗಿ ಪ್ರವೃತ್ತನಾಗುವವ, ೨೨) ಸಾಹಸಿ, ೨೩) ಸಿದ್ಧಪ್ರತಾಪಿ, ೨೪) ವಿದ್ಯೆ ರೂಪ-ಗುಣ ಮತ್ತು ಉಪಭೋಗಗಳಲ್ಲಿ ಪತಿಗಿಂತಲೂ ಮಿಗಿಲಾದವ, ೨೫) ಸುಂದರವಾದ ವೇಷಭೂಷಣಗಳಿಂದ ಅಲಂಕೃತನಾದವ ಮತ್ತು ೨೬) ಮರ್ಮವನ್ನು ತಿಳಿದವ, ಈ ಇಪ್ಪತ್ತಾರು ಸಿದ್ಧಪುರುಷರಲ್ಲಿರುವ ವಿವಿಧ ಲಕ್ಷಣಗಳು. ಇವುಗಳಲ್ಲಿ ಒಂದಾಗಲೀ ಹಲವಾಗಲೀ ಇದ್ದ-ಪುರುಷನು ಸ್ತ್ರೀಯರಲ್ಲಿ ಸದಾ ಸಿದ್ಧಹಸ್ತರಾಗುತ್ತಾರೆ.

# ಅತ್ಯಂತ ಪ್ರಯತ್ನದಿಂದ ವಶರಾಗುವ ಸ್ತ್ರೀಯರ ಪ್ರಕರಣ

ಈ ಸ್ತ್ರೀಯರು ವಿಶೇಷ ಪ್ರಯತ್ನವಿಲ್ಲದೆ ವಶರಾಗುತ್ತಾರೆ, ಅಂದರೆ ಸಾಧಾರಣ ಪ್ರಯತ್ನಮಾಡಿದರೆ ಒಪ್ಪುತ್ತಾರೆ. ೧) ಬಾಗಿಲಿನಲ್ಲಿ ನಿಲ್ಲುವವಳು ಮತ್ತು ಅಟ್ಟವನ್ನೇರಿ ಕೆಳಗೆ ಬೀದಿಯನ್ನು ನೋಡುತ್ತ ನಿಲ್ಲುವವಳು ೨) ತರುಣ ನೆರೆಮನೆಯವನಲ್ಲಿ ಮಾತನಾಡುತ್ತ ಕೂಡ್ರುವವಳು. ೩) ಯಾವಾಗಲೂ ನೋಡುತ್ತಿರುವವಳು. ೪) ನೋಡಿದ ಮಾತ್ರಕ್ಕೆ ಭುಜಗಳನ್ನು ಮುಚ್ಚಿಕೊಳ್ಳುವವಳು. ೫) ಯಾವಳಿಗೆ ಕಾರಣವಿಲ್ಲದೆ ಸವತಿಯನ್ನು ಮಾಡಿಕೊಳ್ಳಬೇಕಾಯಿತೋ ಅಂಥವಳು. ೬) ಪತಿಯನ್ನು ದ್ವೇಷಿಸುವವಳು ಇಲ್ಲವೆ ಅವನ ಕೂಡ ವೈರ ಕಟ್ಟಿಕೊಂಡವಳು. ೭) ಯೋಗ್ಯ ಪಾಲಕರಿಲ್ಲದವಳು. ೮) ಸಂತಾನವಾಗದವಳು. ೯) ಯಾವಾಗಲೂ ತವರುಮನೆಯಲ್ಲಿದುವವಳು. ೧೦) ಪ್ರಿಯ-ಜನರು ಮೃತರಾದವಳು. ೧೧) ಮಾತುಗಾರಿ. ೧೨) ಸಂಬಂಧಗಳನ್ನು ಕೂಡಿಸಿಕೊಡುವವಳು. ೧೩) ನಟರ ಸ್ತ್ರೀಯಂದಿರು. ೧೪) ಬಾಲವಿಧವೆ. ೧೫) ತಾನು ದರಿದ್ರಳಿದ್ದೂ ಹೆಚ್ಚಾಗಿ ಉಪಭೋಗಗಳನ್ನು ಇಚ್ಛಿಸುವವಳು. ೧೬) ದೊಡ್ಡಣ್ಣನ ಹೆಂಡತಿ, ಮನೆಯಲ್ಲಿ ಅನೇಕಾನೇಕ ಮೈದುನರ ಹೆಂಡಂದಿರಿರುವವಳು. ೧೭) ತನ್ನನ್ನು ಕುಶಲಳೆಂದು ಪತಿಯನ್ನು ಮೂರ್ಖನೆಂದು ತಿಳಿಯುವ ಸ್ತ್ರೀ. ೧೯) ತಾನು ವಿಶೇಷಳಿದ್ದುದರಿಂದ ತನ್ನ ಪತಿಯ ಸರ್ವಸಾಧಾರಣತೆಯಿಂದ ಉದ್ವಿಗ್ನಳಾಗುವವಳು. ೨೦) ಯಾವಾತನ ಕೂಡ ವಾಕ್‌ನಿಶ್ಚಯವಾಗಿ ಕಡೆಗೆ ಅನ್ಯಕಡೆಗೆ ಲಗ್ನವಾಗಿ ಹೋದವಳು. ೨೧) ಯಾವಾತನ ಓರಿಗೆಯವಳು, ಅವನ ಜತೆಗೆನೇ ಬುದ್ಧಿ, ಶೀಲ, ಮಿದುಳು ಮತ್ತು ಆಯುಷ್ಯ ಬೆಳೆದವಳು. ೨೨) ಯಾವಾತನ ವಿಷಯಲ್ಲಿ ಪಕ್ಷಪಾತಮಾಡುತ್ತಾಳೋ ಅವಳು. ೨೩) ಯಾವಳು ಪತಿಯಿಂದ ವಿನಾಕಾರಣ ಅವಮಾನಿತಳಾಗುತ್ತಾಳೋ ಅವಳು. ೨೪) ಸವತಿಯರಿಂದ ತುಚ್ಛಳೆಂದು ತಿಳಿಯಲ್ಪಟ್ಟವಳು. ೨೫) ಯಾವಳ ಪತಿಯು ಪರದೇಶದಲ್ಲಿರುತ್ತಾನೋ ಅವಳು. ೨೬) ಹೊಲಸುತನದಿಂದ ಇರುವವನ ಪತ್ನಿ. ೨೭) ಡಂಕನ್ನಿಟ್ಟು

ಕೊಳ್ಳುವವನ ಪತ್ನಿ. ೨೮) ವೇಶ್ಯೆಯರನ್ನೇ ಪತ್ನಿಯರನ್ನಾಗಿ ಮಾಡಿಕೊಂಡಿದ್ದವನ ಸ್ತ್ರೀ. ೨೯) ನಪುಂಸಕನ ಪತ್ನಿ. ೩೦) ಆಲಸಿ. ೩೧) ಯಾವನಲ್ಲಿ ಗಂಡುಸತನವಿಲ್ಲವೋ ಅವನ ಪತ್ನಿ. (ನಪುಂಸಕರು ಅಜನ್ಮ ಗಂಡುಸತನ ವಿಲ್ಲದವರು, ಮಧ್ಯದಲ್ಲಿ ಅಮಿತ ಭೋಗವನ್ನು ಮಾಡಿ ಗಂಡುಸತನವನ್ನು ಕಳೆದುಕೊಂಡವರು ಎಂದು ಇಲ್ಲಿ 'ಗಂಡುಸತನ'ದ ಅರ್ಥ. ಅನು.) ೩೨) ಅಂಗವಿಹೀನ ಹಾಗೂ ಗೂನರ ಪತ್ನಿಯರು. ೩೩) ಕುಷ್ಠರ ಹೆಂಡಿಂದಿರು ೩೪) ಕುರೂಪಿಗಳ ಹೆಂಡಂದಿರು. ೩೫) ಮುತ್ತು-ಮಣಿಗಳನ್ನು ಮಾರುವವನ ಪತ್ನಿ. ೩೬) ಗ್ರಾಮ್ಯ ಸ್ತ್ರೀ. ೩೭) ಮುಖದಿಂದ ಜೊಲ್ಲು ಸೋರುತ್ತಿದ್ದವಳು ಮತ್ತು ೩೮) ಮುದುಕರ ಹೆಂಡಂದಿರು.

ಸರ್ವಸಾಧಾರಣವಾಗಿ ಈ ತರಹದ ಸ್ತ್ರೀಯರು ವ್ಯಭಿಚಾರಿಣಿಯರಿರುತ್ತಾರಲ್ಲದೆ ಸುಲಭ ಸಾಧ್ಯರೆಂದು ಸೂತ್ರಕಾರರ ಮತ. ಅಂತೆಯೇ ಅಲ್ಪ ಯತ್ನದಿಂದ ಸಾಧ್ಯರಾಗುವ ಸ್ತ್ರೀಯರನ್ನು ಇಲ್ಲಿ ಸಂಗ್ರಹಿಸಲಾಗಿದೆ. ಯಾವಾತನ ಜತೆಗೆ ಸ್ತ್ರೀಯು ಪ್ರಾರಂಭದಲ್ಲಿಯೇ ಕಲೆಯುತ್ತಾಳೋ ಅವನ ವಿಷಯಕ್ಕೆ ಅವಳ ಹೃದಯದಲ್ಲಿ ಅವಶ್ಯವಾಗಿಯೂ ಪಕ್ಷಪಾತ (Partiality) ವಿರುತ್ತದೆ. ನಿರಪರಾಧಿಯಾದ ಸ್ತ್ರೀಯು ವ್ಯಭಿಚಾರಿಣಿಯಾಗುವದಕ್ಕೆ ಮೂರು ಕಾರಣಗಳಿವೆ. ಅವು ಯಾವವೆಂದರೆ, ಸಂಶಯದಿಂದ ಪತಿಯು ತಿರಸ್ಕರಿಸಿ ಏಕಾಂತವಾಸವನ್ನು ಮಾಡುತ್ತಿದ್ದರೆ, ಇಲ್ಲವೆ ಯಾವ ಸ್ತ್ರೀಯನ್ನಾದರೂ ಇಟ್ಟುಕೊಂಡಿದ್ದರೆ ಅಥವಾ ತನ್ನ ಮೇಲೆ ಇನ್ನೊಬ್ಬಳನ್ನು ಲಗ್ನವಾದರೆ ದುಷ್ಟ ಸ್ತ್ರೀಯಳದಾದರೂ ಇದೇ ಸ್ಥಿತಿಯಾಗುತ್ತದೆ ಯಾಕೆಂದರೆ ಪತಿಯು ಅವಳ ಕೂಡ ಕಲೆಯುವದೇ ಇಲ್ಲ, ಅದಕ್ಕಾಗಿ ಅವಳೂ ಅನ್ಯರನ್ನು ಆಶ್ರಯಿಸುವ ಪ್ರಯತ್ನಮಾಡುತ್ತಾಳೆ.

ಈ ಅಧ್ಯಾಯದ ಉಪಸಂಹಾರವನ್ನು ಮುಂದಿನ ಎರಡು ಶ್ಲೋಕಗಳಿಂದ ಸೂತ್ರಕಾರರು ಮಾಡುತ್ತಾರೆ.

**ಇಚ್ಛಾ ಸ್ವಭಾವತೋ ಜಾತಾ ಕ್ರಿಯಯಾ ಪರಿಬೃಂಹಿತಾ ।**
**ಬುದ್ಧ್ಯಾ ಸಂಶೋಧಿತೋದ್ವೇಗಾ ಸ್ಥಿರಾ ಸ್ಯಾದನಪಾಯಿನೀ ॥**

ಸ್ವಭಾವಜನ್ಯವಾದ ಇಚ್ಛೆಯು ಕ್ರಿಯೆಗಳಿಂದ ವೃದ್ಧಿಯನಾಗುತ್ತದೆ, ಬುದ್ಧಿಗೆ ಉದ್ವೇಗದ ಸಂಶೋಧನೆಯನ್ನು ಮಾಡಿಕೊಟ್ಟರೂ ಕೂಡ ಅದು ಅಸ್ಥಿರವಾಗದೆ ಸ್ಥಿರವಾಗಿರುತ್ತದೆ.

ಯಾವದೇ ಸುಂದರ ಪುರುಷನಿಗೆ ಸ್ತ್ರೀ ಮತ್ತು ಸುಂದರ ಸ್ತ್ರೀಗೆ ಪುರುಷನು ಬೇಕೆನಿಸುತ್ತಾರೆಂಬುದು ಸ್ವಾಭಾವಿಕ ಮಾತು. ಈ ಅನಿಸಿಕೆಯು ಇಚ್ಛೆ ಮತ್ತು ಉಪಾಯಗಳಿಂದ ವೃದ್ಧಿಯಾಗುತ್ತದೆ. ಯಾವಾಗ ಈ ಅನಿಸುವಿಕೆಗೆ ಉಪಾಯಗಳು ಸೂಚಿಸದಿದ್ದರೆ ಮನಸ್ಸು ಉದ್ವಿಗ್ನವಾಗುತ್ತದೆ. ಇದಕ್ಕಾಗಿ ಬುದ್ಧಿಮತ್ತೆಯಿಂದ ಉಪಾಯಗಳನ್ನು ಹುಡುಕಿದ ನಂತರ ಅದರಲ್ಲಿ ಸಮಾಧಾನವೂ ಸಿಕ್ಕುತ್ತದೆ. ಇಂಥ ಇಚ್ಛೆಯನ್ನು ತಡೆಹಿಡಿಯುವದು ಅಸಾಧ್ಯವಿದ್ದುದರಿಂದ ಅದು ಸ್ಥಿರವಾಗಿರುತ್ತದೆ.

**ಸಿದ್ಧತಾಮಾತ್ಮನೋ ಜ್ಞಾತ್ವಾ ಲಿಂಗಾನ್ಯುನ್ನೀಯ ಯೋಷಿತಾವ್ ।**
**ವ್ಯಾವೃತ್ತಿಕಾರಣೋಚ್ಛೇದಿ ನರೋ ಯೋಷಿತ್ಸು ಸಿಧ್ಯತಿ ॥**

ತನ್ನ ಕಾರ್ಯಸಿದ್ಧಿಯ ನಿಶ್ಚಯ, ಅದನ್ನು ಇಂಗಿತ ಮತ್ತು ಆಕಾರಗಳಿಂದ ನಿಶ್ಚಯಿಸಿ, ವಿಕಾರವನ್ನು ಹತ್ತಿಕ್ಕಿ, ಕಾರಣಗಳನ್ನು ದೂರ ಮಾಡಿದ ಮನುಷ್ಯನು ಸ್ತ್ರೀಯರಲ್ಲಿ ಸಿದ್ಧನಾಗುತ್ತಾನೆ.

ನಾನು ಇದರಲ್ಲಿ ಜಯಶಾಲಿಯಾಗಬಹುದೇ? ಇವಳ ಇಂಗಿತಾಕಾರಗಳು ನನ್ನ ವಿಷಯಕ್ಕೆ ಹೇಗಿವೆ? ಎಂಬ ಮಾತುಗಳನ್ನು ಲಕ್ಷಿಸಿ, ರಾಗವರ್ಧನ ಮುಂತಾದವುಗಳನ್ನು ತಡೆಹಿಡಿದು, ದೋಷಯುತವಾದ ಕಾರಣಗಳನ್ನು ನಾಶಮಾಡಿ, ಸ್ತ್ರೀಯರಲ್ಲಿ ಅಭಿಯೋಗಮಾಡಿವರೇನೇ ಸ್ತ್ರೀಯರಲ್ಲಿ ಸಿದ್ಧರಾಗುತ್ತಾರೆ. ಇದರಂತೆ ಶ್ರೀ ವಾತ್ಸ್ಯಾಯನ ಮುನಿಕೃತ ಕಾಮಸೂತ್ರದಲ್ಲಿನ ಪರದಾರಿಕವೆಂಬ ಐದನೇ ಅಧಿಕರಣದಲ್ಲಿನ, ಪರದಾರಾಭಿಗಮನವೆಂಬ ಮೊದಲನೇ ಪ್ರಕರಣ, ಸಮಾಪ್ತ.

---

## ಅಧ್ಯಾಯ : ೨

# ಪರಿಚಯಕಾರಣ ಪ್ರಕರಣ

ಹಿಂದಿನ ಪ್ರಕರಣದ ಉಪಸಂಹಾರದಲ್ಲಿ ಕ್ರಿಯೆಗಳಿಂದ ಇಚ್ಛೆಯು ಸ್ವಾಭಾವಿಕವಾಗಿ ವೃದ್ಧಿಯಾಗುತ್ತದೆಯೆಂದು ಹೇಳಲಾಯಿತು. ಹೀಗೆ ಸ್ವಾಭಾವಿಕವಾಗಿ ಇಚ್ಛೆಯನ್ನು ವೃದ್ಧಿಯನ್ನು ಹೆಚ್ಚಿಸುವ ಆ ಕ್ರಿಯೆಗಳಾಗುವವು? ಅದಕ್ಕಾಗಿ ಆ ಕ್ರಿಯೆಗಳನ್ನು ತೋರಿಸುವದಕ್ಕಾಗಿ ಹೇಳುವುದೇನಂದರೆ:—

**ಯಥಾ ಕನ್ಯಾ ಸ್ವಯಮಭಿಯೋಗಸಾಧ್ಯಾ ನ ತಥಾ ದೂತ್ಯಾ। ಪರಸ್ತ್ರಿಯಸ್ತು ಸೂಕ್ಷ್ಮಭಾವಾ ದೂತಿಸಾಧ್ಯಾ ನ ತಥಾತ್ಮನೇತ್ಯಾಚಾರ್ಯಾಃ॥**

ಕನ್ಯೆ ಹಾಗೂ ಪರಸ್ತ್ರೀ ಈ ಇಬ್ಬರು ನಾಯಿಕೆಯರು ಈ ಸೂತ್ರದಲ್ಲಿಯ ವಿಷಯ. ಅದರಂತೆ ಸ್ವಯಂ ತನ್ನಿಂದ ಹಾಗೂ ದೂತಿಯಿಂದ ಎಂದು ಎರಡು ತರಹದ ಅಭಿಯೋಗಗಳಾಗುತ್ತವೆ. ಇದರ ಬಗ್ಗೆ ಪೂರ್ವಾಚಾರ್ಯರ ಮತವೇನೆಂದರೆ, ಯಾವ ಪ್ರಕಾರ ಕನ್ಯೆಯು ತನ್ನ ಕಡೆಗೆ ಎಳೆದುಕೊಳ್ಳಲ್ಪಡುತ್ತಾಳೋ ಅದರಂತೆ ಪರಸ್ತ್ರೀಯರಿಲ್ಲ. ಕನ್ಯೆಯರು ಯಾರ ಜತೆಗೂ ಸಮಾಗಮಿಸಿರುವುದಿಲ್ಲ, ಆದಕಾರಣ ಅವರಿಗೆ ಯಾವ ಅನು ಅನುಭವವೂ ಇರುವದಿಲ್ಲ, ಅದಕ್ಕಾಗಿ ಅವರ ಮೇಲೆ ಯುಕ್ತಿಗಳೇ ಸಂಯೋಗವನ್ನು ಸೂಚಿಸಿಕೊಡುತ್ತವೆ. ಅದರ ಉಪಾಯಗಳನ್ನು ನಾಯಕನು ತಾನೇ ತಾನಾಗಿ ಮಾಡಬಹುದು, ದೂತಿಯಲ್ಲ. ಇದರ ಸವಿಸ್ತರ ವಿವರಣೆಯನ್ನು ಕನ್ಯಾಸಂಪ್ರಯುಕ್ತದಲ್ಲಿ ಹೇಳಲಾಗಿದೆ. ಪರಸ್ತ್ರೀಯು ನಾದರೋ ಸಮಾಗಮದ ಅನುಭವವನ್ನು ಹೊಂದಿರುವುದರಿಂದ ಸೂಕ್ಷ್ಮಭಾವನೆಯವರಾಗಿರುತ್ತಾರೆ. ಸಿಕ್ಕುವ ಮುಂಚೆ ಪುರುಷನು ತನ್ನ ಕಾರ್ಯವನ್ನು ತಾನು ಸಾಧಿಸಿಕೊಳ್ಳುತ್ತಿರುತ್ತಾನೆ, ಆದರೆ; ಅವರಲ್ಲಿ ಭಾವನೆಗಳನ್ನು ಪ್ರದರ್ಶಿಸುವುದೂ ಅವರ ಭಾವನೆಗಳನ್ನು ಅರ್ಥಮಾಡಿಕೊಳ್ಳುವದೂ ಈ ಎರಡು ಮಾತುಗಳು ದೂತಿಯರನ್ನು ನಿಯೋಜಿಸುವದರಿಂದ ಆಗುತ್ತಿರುತ್ತವೆ. ಇದಕ್ಕಾಗಿ ಅವರನ್ನು ದೂತಿಯರಿಂದ ಸಿದ್ಧಮಾಡಿಕೊಳ್ಳಬೇಕಾಗುತ್ತದೆ.

**ಸರ್ವತ್ರ ಶಕ್ತಿವಿಷಯೆ ಸ್ವಯಂ ಸಾಧನಮುಪಕನ್ನತರಕಂ ದುರುಪ-ಪಾದತ್ವಾತ್ತಸ್ಯ ದೂತಿಪ್ರಯೋಗ ಇತಿ ವಾತ್ಸ್ಯಾಯನಃ ॥**

ಕನ್ಯೆಯೇ ಇರಲಿ, ಪರಸ್ತ್ರೀಯೇ ಇರಲಿ, ಯಾವಾಗ ಸ್ವಯಂತಾನೇ ಉಪಾಯ ಮುಂತಾದವುಗಳನ್ನು ಮಾಡುತ್ತಾನೋ, ಆಗ ದೂತಿಯಿಂದ ಉಪಾಯಗಳನ್ನು ಮಾಡಿಸುವದಕ್ಕಿಂತಲೂ ಒಳ್ಳೇಯದು. ಯಾವಾಗ ತನ್ನಿಂದ ಉಪಾಯಗಳನ್ನು ಮಾಡುವದು ಕಠಿಣವಾಗುತ್ತದೆಯೋ-ಅಂದರೆ ಬಹಳ ತ್ರಾಸು ತೆಗೆದುಕೊಳ್ಳಬೇಕಾಗುತ್ತದೆಯೋ ಆಗ ದೂತಿಯರನ್ನುಪ ಯೋಗಿಸಬೇಕೆಂದು ವಾತ್ಸ್ಯಾಯನನ ಮತ.

ಯಾವಳ ಕೂಡ ಮೊದಲನೇ ಸಲವೇ ಸಾಹಸಮಾಡಲಾಗುತ್ತದೆಯೋ ಮತ್ತು ಯಾವಳ ಕೂಡ ನಾಯಕನು ಚೆನ್ನಾಗಿ ಮಾತುಕತೆಗಳನ್ನಾಡುತ್ತಾನೆಯೋ ಅಂಥವಳನ್ನು ನಾಯಕನು ಸ್ವಯಂತಾನೇ ಸಿದ್ಧ ಮಾಡಬೇಕು, ದೂತಿಯರನ್ನು ಯೋಜಿಸಬಾರದು.

ಯಾರಿಗೆ ತಾನು-ತಾನಾಗಿಯೇ ಉಪಾಯಮಾಡಬೇಕೆಂದು ಇಚ್ಛೆ ಇದೆಯೋ ಅವರು ಮೊದಲಿಗೆ ಪರಿಚಯವನ್ನು ಮಾಡಿಕೊಳ್ಳಬೇಕು. ಗುರುತು-ಪರಿಚಯಗಳೂ ಭೆಟ್ಟಿಯೂ ಚನ್ನಾಗಿ ಆಗುತ್ತಿರಬೇಕು. ಇದು ತನ್ನಿಂದ ಇಲ್ಲವೆ ದೂತಿಯರಿಂದ ಆಗುತ್ತಿರುತ್ತದೆ.

**ಸ್ವಾಭಾವಿಕ ಹಾಗೂ ಪ್ರಯತ್ನದಿಂದಾಗುವ ದರ್ಶನಗಳು.** ದರ್ಶನಗಳಲ್ಲಿ (ಭೆಟ್ಟಿ) ಸ್ವಾಭಾವಿಕ ಮತ್ತು ಪ್ರಯತ್ನದಿಂದಾಗುವ, ಎಂದು ಎರಡು ತರಹಗಳಿವೆ. ಆ ಎರಡೂ ತರಹದ ವರ್ಣನೆಯು ಮುಂದೆ ಹೇಳಿದಂತೆ:—

ತನ್ನ ಮನೆಯಕಡೆಗೆ ಬಂದು ಹೋಗುವವಳನ್ನು ನೋಡುವದು ಸ್ವಾಭಾವಿಕ. ಅದರಂತೆ, ಮಿತ್ರ, ಆಪ್ತರು, ಮಾವ ಮತ್ತು ವೈದ್ಯನ ಮನೆಯ ಹತ್ತಿರ ಯಜ್ಞ, ವಿವಾಹ, ಉತ್ಸವ, ದುಃಖ ಹಾಗೂ ವನವಿಹಾರ ಮುಂತಾದವುಗಳಲ್ಲಿ ನೋಡುತ್ತಿರುವದು, ಪ್ರಾಯತ್ನಿಕ.

**ಬಾಹ್ಯ ಪರಿಚಯದ ಕಾರಣಗಳು.** ಪ್ರಯತ್ನ ಹಾಗೂ ಸಾಹಜಿಕವಾಗಿ ಆಗುವ ದರ್ಶನಗಳಲ್ಲಿ ಅಭ್ಯಂತರ ಮತ್ತು ಬಾಹ್ಯ ಈ ಭೇದಗಳಿಂದಾಗಿ

ಪರಿಚಯದ ಎರಡು ಕಾರಣಗಳಿವೆ. ಇವೆರಡರಲ್ಲಿ ಮೊದಲು ಬಾಹ್ಯ ಕಾರಣವನ್ನು ತಕ್ಕೊಂಡು ಸೂತ್ರಕಾರರು ಮುಂದಿನಂತೆ ಅದನ್ನು ವಿವರಿಸುತ್ತಾರೆ:

ನೋಡುವಾಗ ಆತನನ್ನು ವಿಕಾರಪರವಶತೆಯಿಂದ ನಿರಂತರವಾಗಿ ನೋಡುತ್ತಿರುವದು, ಕೂದಲುಗಳನ್ನು ಬಿಚ್ಚಿ ಮತ್ತೆ ಕಟ್ಟಿಕೊಳ್ಳುವದು, ಉಗುರುಗಳಿಂದ ತುರಿಸಿಕೊಳ್ಳುವದು, ವಸ್ತ್ರಾಭರಣಗಳನ್ನು ಓರಣಮಾಡಿ ಕೊಳ್ಳುವದು, ಕೆಳತುಟಿಯನ್ನು ಕಚ್ಚುವದು ಮತ್ತು ಮೈತ್ರಿಣಿಯರ ಜತೆಗೆ ಆಯಾ ಲೀಲೆಗಳನ್ನು ಅವನು ನೋಡುತ್ತಿರುವಂತೆ ಮಾಡುವದು, ಅನ್ಯರ ಪ್ರಸಂಗಗಳನ್ನು ಅವನ ಮಾತಿನಲ್ಲಿ ಹೇಳುವದು, ತನ್ನ ತ್ಯಾಗ ಮತ್ತು ಉಪಭೋಗಗಳನ್ನು ಪ್ರಕಟಮಾಡುವದು, ಮೈತ್ರಿಣಿಯರ ಉಡಿಯಲ್ಲಿ ಮಲಗಿಕೊಂಡು ಮೈಯನ್ನು ಒಡಮುರಿಯುವದು, ಆಕಳಿಸುತ್ತಿರುವಾಗ ಅವನ ಕಡೆಗೆ ನೋಡಿ ಹುಬ್ಬುಗಳನ್ನು ಆಕುಂಚನ ಮಾಡುವದು, ಹಗು ರಾಗಿ ಮಾತನಾಡುವದು, ಅವನ ಮಾತುಗಳತ್ತ ಲಕ್ಷಕೊಡುವದು, ಅವು ಗಳ ಉದ್ದೇಶವನ್ನು ತಕ್ಕೊಂಡು ಬಾಲಕರ ಕೂಡ ಇಲ್ಲವೆ ಅನ್ಯಜನರಕೂಡ ದ್ವಿದ್ವ್ಯಾರ್ಥವಿದ್ದ ಮಾತುಗಳನ್ನಾಡುವದು, ಅವನ ವಿಷಯಕ್ಕಿದ್ದ ತನ್ನ ಮನೋರಥವನ್ನು ಅನ್ಯಮಾರ್ಗಗಳಿಂದ ಬಹಿರಂಗಪಡಿಸುವದು. ಅದರ ಉದ್ದೇಶವನ್ನೇ ತಕ್ಕೊಂಡು ಬಾಲಕನ ಚುಂಬನ, ಆಲಿಂಗನ ಮತ್ತು ಅದೇ ಬಾಲಕನಿಗೆ ನಾಲಿಗೆಯಿಂದ ಎಲೆಯನ್ನು ಕೊಡುವದು ಮತ್ತು ಗದ್ದ ದಿಂದ ಹಣೆಯನ್ನು ಅಲುಗಾಡಿಸುವದು. ಈ ಯೋಗಗಳಲ್ಲಿ ಯಾವದು ಮಾಡಲಿಕ್ಕೆ ಬರುವಂಥದೋ ಮತ್ತು ಸಮಯಾವಕಾಶವು ಹೇಗಿದೆಯೋ ಅದರಂತೆ ಅದರ ಪ್ರಯೋಗಮಾಡಬೇಕು.

ನಾಯಿಕೆಯ ಉಡಿಯಲ್ಲಿರುವ ಮಗುವನ್ನು ಪ್ರೀತಿಸುವದು, ಅದಕ್ಕೆ ಮಕ್ಕಳ ಆಟಿಕೆಗಗಳನ್ನು ಕೊಡುವದು ಮತ್ತು ಅದನ್ನು ಎತ್ತಿಕೊಳ್ಳುವದು, ಸಮೀಪಕ್ಕೆ ಬಂದು ಅವಳಕೂಡ ಮಾತನಾಡುವದು, ಯಾವ ಮನುಷ್ಯನು ಅವಳಕೂಡ ಮಾತನಾಡಬಲ್ಲನೋ ಅವನ ಕೂಡ ಮಿತ್ರತ್ವವನ್ನು ಬೆಳಸಿ ಕೆಲಸಮಾಡಿಕೊಳ್ಳಬೇಕು, ಅವನು ಹೋಗಿ ಬರುವದಕ್ಕಾಗಿ ಕೆಲಸವನ್ನು ತೋರಿಸಿಕೊಡಬೇಕು, ಅದು ಅವಳಿಗೆ ಕೇಳಿಸುವಂತೆ, ಆದರೆ ತಾನವಳಿಗೆ

ಪ್ರತ್ಯಕ್ಷ ಕಾಣದಂತಹ ಸ್ಥಳದಲ್ಲಿ ಅವನ ಕೂಡ ಕಾಮಶಾಸ್ತ್ರದ ಚರ್ಚೆಯನ್ನು ಮಾಡಬೇಕು.

**ಅಭ್ಯಂತರ ಪರಿಚಯದ ಕಾರಣಗಳು.** ಪರಿಚಯವೃದ್ಧಿಯಾದ ಮೇಲೆ ಅವಳ ಹತ್ತಿರ ಧನ-ಕನಕಾದಿಗಳನ್ನು ಕೊಡಬೇಕು. ಅದನ್ನು ಪ್ರತಿ ದಿನ ಇಲ್ಲವೆ ಪ್ರತಿಕ್ಷಣಕ್ಕೆ ಅವಳಿಂದ ಇಸಿದುಕೊಳ್ಳುತ್ತ ಹೋಗಬೇಕು. ಅವಳ ವಶಕ್ಕೆ ಸುವಾಸನೆಯ ತೈಲ ಮತ್ತು ಅಡಿಕೆ ಇವನ್ನೂ ಕೊಟ್ಟಿರಬೇಕು.

ನಮ್ಮ ಕೂಡ ಕೂತು ಏಕಾಂತದಲ್ಲಿ ಮಾತುಗಳನ್ನಾಡಬೇಕು, ಎಂದು ಮುಂತಾಗಿ ತನ್ನ ಮನೆಯ ಸ್ತ್ರೀಯರ ಜತೆಗೆ ಅವಳಿಗೆ ಬರಲಿಕ್ಕೆ ಆಮಂತ್ರಣ ಕಳಿಸಬೇಕು. ಅವಳು ಬಂದನಂತರ ಅವಳನ್ನು ಅವರ ಜತೆಗೆ ಮಾತಿನಲ್ಲಿ ಸೇರಿಸಬೇಕು.

ಯಾವ ಉಪಾಯಗಳನ್ನು ಮಾಡಿದರೆ ಪ್ರತಿನಿತ್ಯ ಭೆಟ್ಟಿಯಾಗುತ್ತಯೋ ಮತ್ತು ವಿಶ್ವಾಸವು ಹೆಚ್ಚುತ್ತದೆಯೋ ಆ ಎಲ್ಲ ಉಪಾಯಗಳನ್ನು ಮಾಡಬೇಕು.

ಪತ್ತಾರ, ರತ್ನಕಾರ, ವಜ್ರಪರಿಶೋಧಕ, ಬಂಣಗಾರ ಮುಂತಾದ ಜನರ ಕಡೆಗೆ ಅವಳದೇನಾದರೂ ಕೆಲಸವಿದ್ದರೆ ಅದನ್ನು ತಾನೇ ಮುಂದಾಗಿ ಅವರ ಕೈಯಿಂದ ಮಾಡಿಸಿಕೊಡಬೇಕು. ಈ ಕೆಲಸಗಳನ್ನು ಮಾಡಿಸಿ ಕೊಡುವಾಗ ದರ್ಶನವಾಗುವದು ಗೌಪ್ಯವಾಗಿಯಲ್ಲ, ಬಹಿರಂಗವಾಗಿ ಆಗುವದರ ಅವಶ್ಯಕತೆಯಿದೆ ಆದರೆ ತುಸು ಅವಕಾಶದಲ್ಲಿ ಎಲ್ಲರಿಗೆ ತಿಳಿದು ಬಿಡುತ್ತದೆ. ಕೆಲಸದ ನೆವವಿದೆಯಾದ್ದರಿಂದ ಯಾರೂ ಅನ್ಯಥಾ ತಿಳಿಯುವದಿಲ್ಲ, ಈ ನೆವವಿರದಿದ್ದರೆ ಮಾತ್ರ ಸಂದೇಹಕ್ಕೆ ಪೂರ್ಣ ಅವಕಾಶ ಇದೆ.

ಈ ಕೆಲಸಗಳು ಇನ್ನೂ ಪೂರ್ಣ ಮುಗಿಯದೆ ಇರುವಾಗ ಅನ್ಯ ಕೆಲಸಗಳನ್ನು ಮಾಡಿಸ ಹಚ್ಚಬೇಕು. ಅಂದರೆ ಮೊದಲಿನ ಕೆಲಸಗಳು ಮುಗಿದವೆಂದರೆ, ತಿರುಗಿಯೂ ದರ್ಶನಕ್ಕೆ ಅವಕಾಶ ಸಿಕ್ಕುತ್ತದೆ.

ಅವಳಿಗೆ ದ್ರವ್ಯ ಇಲ್ಲವೆ ಕಲಾಕೌಶಲ್ಯದ ಅಗತ್ಯವೆನಿಸಿದರೆ, ಅದನ್ನು ಒದಗಿಸಿಕೊಡಬೇಕಲ್ಲದೆ, ಅದರ ಉತ್ಪತ್ತಿ, ಆಗಮ, ಪ್ರಯೋಗ, ಉಪಾಯ

ಮತ್ತು ವಿಜ್ಞಾನ ಇವುಗಳನ್ನು ತನ್ನ ಬುದ್ಧಿಮತ್ತೆಯಿಂದ ವಿವರಿಸಿ ತೋರಿಸಬೇಕು.

ಪೂರ್ವಾಚಾರಗಳನ್ನು ಮತ್ತು ವಸ್ತು ಗುಣಪರೀಕ್ಷೆಗಳನ್ನು ಅವಳ ಹಾಗೂ ಅವಳ ಪರಿಜನರ ಹತ್ತಿರ ಮಾಡಬೇಕು. ಇದರಂತೆ ವಾದ ವಿವಾದಗಳನ್ನು ಮಾಡುತ್ತಿರುವಾಗ ಅವುಗಳಲ್ಲಿನ ಅದ್ಭುತಗಳನ್ನು ತೋರಿಸಿ ಕೊಡಬೇಕು, ಅಂದರೆ ಇವನ ವಿಚಕ್ಷಣತೆಯಿಂದ ಅವಳಲ್ಲಿ ಅಭಿಮಾನವೂ ಆದರವೂ ಹುಟ್ಟುತ್ತದೆ.

**ಸಂಕೇತದ ಕೆಲವು ಅರ್ಥಗಳು:** ಸ್ತ್ರೀಪುರುಷರಲ್ಲಿ ಮೊದಲಿಗೆ ಸಂಕೇತದಿಂದಲೇ ಹೆಚ್ಚಿನ ಕಾರ್ಯವಾಗುತ್ತಿರುತ್ತದೆ ಆದಕ್ಕಾಗಿ ಸಂಕೇತ ದಿಂದ ತಿಳಿಯುವ ಮತ್ತು ತಿಳಿಸುವ ಅರ್ಥವನ್ನು ಹೇಳುತ್ತಾರೆ. ಮೂಲ ಕಾಮಶಾಸ್ತ್ರದ ಗ್ರಂಥಗಳಲ್ಲಿ ಆರು ತರಹದ ಸಂಕೇತಗಳನ್ನು ಕೊಟ್ಟಿದ್ದಾರೆ ಅವುಗಳನ್ನೇ ಇಲ್ಲಿ ವಿವರಿಸುತ್ತಾರೆ.

**ಭಾಷಾಸಂಕೇತ:** ಯಾವ ಪ್ರಕಾರ ಆದ್ಯ (ಭಾಷೆಯು ಪ್ರಚಲಿತ ವಿರದಿರುವಾಗಿನ) ಜನರು ತಮಗಿದ್ದ ಬೇಕು-ಬೇಡಗಳನ್ನು ಕೇವಲ ಸಂಜ್ಞೆಯಿಂದ ತಿಳಿಸುತ್ತಿದ್ದರೋ ಅದರಂತೆ ಈಗಿನ ನಾಗರಿಕರೂ ಇಂತಹ ಕೆಲವು ಬೇಕು-ಬೇಡಗಳನ್ನು ಈಗಲೂ ಕೂಡ ಸಂಜ್ಞೆಯಿಂದಲೇ ಹೇಳುತ್ತಾರೆ. ಪುರುಷನನ್ನು ಫಲರೂಪದಿಂದಲೂ ಸ್ತ್ರೀಯನ್ನು ಪುಷ್ಪರೂಪ ದಿಂದಲೂ ಕರೆಯುತ್ತಾರೆ. ಒಕ್ಕಲಿಗರಲ್ಲಿ ನೇಗಿಲ, ಬ್ರಾಹ್ಮಣರಲ್ಲಿ ದಾಳಿಂಬರ, ಕ್ಷತ್ರಿಯರಲ್ಲಿ ಹಲಸು, ವೈಶ್ಯರಲ್ಲಿ ಬಾಳೇಹಣ್ಣು, ಶೂದ್ರರಲ್ಲಿ ಮಾವು, ರಾಜಪುತ್ರರಲ್ಲಿ ಎರಡನೆಯ ಚಂದ್ರಮ, ಭೂಪತಿಯರಲ್ಲಿ ಕೊಡ, ನೀಚರಲ್ಲಿ ಕಾಲಪುಷ್ಪ, ಸಾಮಂತಪುತ್ರರಲ್ಲಿ ಸರ, ಯುವಕರಲ್ಲಿ ಮಧ್ಯಾಹ್ನ ಬಾಲಕರಲ್ಲಿ ಆಪಕ್ವ, ವಯಸ್ಕರಲ್ಲಿ ಪಕ್ವ, ಬ್ರಾಹ್ಮಣ ಸ್ತ್ರೀಯರಲ್ಲಿ ಕುಂದ ಪುಷ್ಪ, ರಾಜಪುತ್ರಿಯಲ್ಲಿ ಗುಲಾಬಿ, ವೈಶ್ಯಪುತ್ರಿಯಲ್ಲಿ ಮಲ್ಲಿಗೆ, ಶೂದ್ರಪುತ್ರಿಯಲ್ಲಿ ಗೊರಟೆ ಹೂವು, ವಣಿಕಪುತ್ರಿರಲ್ಲಿ ಕಮಲ, ಮಂತ್ರಿಪುತ್ರಿಯಲ್ಲಿ ಉತ್ಪಲ (ತಾವರೆ), ಕಾಮುಕರಲ್ಲಿ ಭ್ರಮರ, ಕಾಮಿನಿಯಲ್ಲಿ ಚೂತಮಂಜರಿ (ಮಾವಿನ ಹೂವಿನ-ಗೊಂಚಲು), ಕರೆಯುವದಕ್ಕೆ ಅಂಕುಶ, ತಡೆಯುವದಕ್ಕೆ ಗೋಡೆ, ರಾತ್ರಿಯಲ್ಲಿ ಮೋಡಮುಚ್ಚಿದ ಚಂದ್ರ, ಹಗಲಿನಲ್ಲಿ

ಸೂರ್ಯಪ್ರಕಾಶ, ಮೊದಲ ಪ್ರಹರದಲ್ಲಿ ಶಂಖ, ಎರಡನೆಯದರಲ್ಲಿ ಮಹಾಶಂಖ, ಮೂರನೆಯದರಲ್ಲಿ ಪದ್ಮ, ನಾಲ್ಕನೆಯದರಲ್ಲಿ ಮಹಾಪದ್ಮ; ಐದನೆಯದರಲ್ಲಿ ರಾಮ, ಆರನೆಯದರಲ್ಲಿ ವಿರಾಮ, ಏಳನೆಯದರಲ್ಲಿ ಹವಳ ಮತ್ತು ಎಂಟನೆಯದರಲ್ಲಿ ರತ್ನದ ಸಂಕೇತವಾಗುತ್ತದೆ- ಇವುಗಳಿಂದ ನಾಗರಿಕರ ಮಾತುಕತೆಗಳಲ್ಲಿ ಪುರುಷರನ್ನು ಫಲಗಳಿಂದ ಸಂಭೋಧಿಸುತ್ತಾರೆ. ಅದರಂತೆ ಮಾತನಾಡುವದು ಹೇಗೆ ಎಂಬುದನ್ನು ತೋರಿಸುತ್ತಾರೆ:

ಉದಾ:— ಬ್ರಾಹ್ಮಣೀ, ಕ್ಷತ್ರಿಯಾ, ವೈಶ್ಯ ಮತ್ತು ಶೂದ್ರಿಣಿಯರ ಮಧ್ಯದಲ್ಲಿ ಕಾಮಿನಿಯಾದ ಮಂತ್ರಿಕುವರಿಯು ನಿಂತುಕೊಂಡಿದ್ದಳು, ಅವಳನ್ನು ಚತುರ್ವರ್ಣದ ಬಾಲಕರ ಮಧ್ಯದಲ್ಲಿ ನಿಂತುಕೊಂಡ ರಾಜಕುವರನು ನೋಡಿದನು, ಎಂಬ ಮಾತನ್ನು ಸಾಂಕೇತಿಕ ಭಾಷೆಯಲ್ಲಿ ಹೇಳುವದಾದರೆ; ಕುಂದ, ಮಾಲತಿ, ಮಲ್ಲಿಗೆ ಮತ್ತು ಗೊರಟಿಗದ ಮಧ್ಯದಲ್ಲಿ ಉತ್ಪಲವನದ ಚೂತಮಂಜರಿಯು ಸಿದ್ಧವಾಗಿ ಅನ್ಯತರವಾದ ಶೋಭೆಯನ್ನು ತೋರಿಸುತ್ತಿತ್ತು, ಅದನ್ನು ದಾಳಿಂಬ, ಹಲಸು, ಬಾಳೀಹಣ್ಣು ಮತ್ತು ಮಾವಿನ ಹಣ್ಣಿನ ಮಧ್ಯದಲ್ಲಿ ಬೆಳಗುತ್ತಿದ್ದ ಎಳೆ ಚಂದ್ರಮನು ನೋಡಿದನು, ಉತ್ಪಲದ ಸುತ್ತಲೂ ಭ್ರಮರಗಳು ಗುಂಜಾರವನ್ನು ಮಾಡುತ್ತಿದ್ದವು, ಎಂದು ಹೇಳಬೇಕು. ಇದರಂತೆ ಬೇರೆ ಬೇರೆ ತರದ ಮಾತುಗಳನ್ನೂ ತಿಳಿದುಕೊಳ್ಳಬೇಕು,

**ಅಂಗಸಂಕೇತ**: ಜಾಣತನದ ಪ್ರಶ್ನೆಯ ಉತ್ತರ ಪ್ರತ್ಯುತ್ತರಗಳಲ್ಲಿ ಕಿವಿಯನ್ನು ತುರಿಸಿಕೊಳ್ಳಬೇಕು, ಬೇಕಾಗಿದ್ದ ಕೆಲಸವನ್ನು ತೋರಿಸುವದಕ್ಕಾಗಿ ತಲೆಯಮೇಲೆ ಕೈಯನ್ನಿಟ್ಟುಕೊಳ್ಳಬೇಕು ಮತ್ತು ಪ್ರೇಮ ಹುಟ್ಟಿದೆಯೆಂಬುದನ್ನು ತೋರಿಸುವದಕ್ಕಾಗಿ ಮೂಗಿನಮೇಲೆ ಬೆರಳನ್ನಿಟ್ಟುಕೊಳ್ಳಬೇಕು. ಆದರವನ್ನು ತೋರಿಸುವದಕ್ಕಾಗಿ ತಲೆಯಮೇಲೆ ಕೈಗಳನ್ನಿಟ್ಟುಕೊಳ್ಳಬೇಕು. ಪುರಸತ್ತಿದೆಯೇ? ಎಂದು ಕೇಳುವದಕ್ಕಾಗಿ ನಡುಬೆರಳನ್ನು ತೋರುಬೆರಳಿನಮೇಲೆ ಏರಿಸಬೇಕು, ಪುರಸತ್ತಿಗೆ ಉತ್ತರವು 'ಹೂಂ' ಎಂದಿದ್ದರೆ ಕೈಗಳನ್ನು ಕೂಡಿಸಬೇಕು. ಕರೆಯಬೇಕಿದ್ದರೆ ಮುಷ್ಟಿಗೆಮಾಡಿ ಕೈಯನ್ನು ಕೂಡಿಸಬೇಕು. ಕಿರಿಬೆರಳಿನ ಮೊದಲಗಣಿಕೆ

ಯಿಂದ ಹೆಬ್ಬೆರಳಿನ ಕಡೇ ಗಣಿಕೆಯ ತನಕ ಹದಿನೈದು ಗಣಿಕೆಗಳಾಗುತ್ತವೆ. ಇವು ಪ್ರತಿಪದೆಯಿಂದ ಹದಿನೈದು ತಿಥಿಗಳ ಸಂಕೇತಗಳಾಗುತ್ತವೆ. ಹೆಬ್ಬೆರಳಿಗೆ ಪೂರ್ವ, ತೋರುಬೆರಳಿಗೆ ದಕ್ಷಿಣ, ನಡುಬೆರಳಿಗೆ ಪಶ್ಚಿಮ ಆದರಂತೆ ಉಂಗುರ ಬೆರಳಿಗೆ ಉತ್ತರ ದಿಕ್ಕಿನ ಸಂಕೇತವಾಗುತ್ತದೆ. ಬಲಗೈಗೆ ಶುಕ್ಲಪಕ್ಷ ಆದರಂತೆ ಎಡಗೈಗೆ ಕೃಷ್ಣಪಕ್ಷವೆಂದು ತಿಳಿಯಬೇಕು. ಇವುಗಳ ಉಪಯೋಗವು ಓಣಿ ಓಣಿ ತಿರುಗುವ ನಾಗರಿಕನಿಗಿದೆ. ಅವಳು ಎದುರಿಗೆ ನಿಂತದ್ದನ್ನು ನೋಡಿ ಇವನು ತನ್ನ ಅಂಗದಿಂದ ಈ ಮಾತುಗಳ ಸೂಚನೆಗಳನ್ನು ಕೊಡುತ್ತಾನೆ ಮತ್ತು ತಕ್ಕೊಳ್ಳುತ್ತಾನೆ. ಈ ಸಂಕೇತಗಳು ಇಂದೂ ಕೂಡ ಚೆನ್ನಾಗಿಯೇ ಪ್ರಚಾರದಲ್ಲಿವೆ.

**ಪುಷ್ಪಮಾಲೆಯ ಸಂಕೇತ:** ಅನುರಾಗದಲ್ಲಿ ಕೆಂಪು, ವಿರಾಗದಲ್ಲಿ ಹಳದಿ, ಸ್ನೇಹಾಭಾವದಲ್ಲಿ ಕರಿಯ ದಾರದಿಂದ ಕಟ್ಟಿದ ಮಾಲೆಯ ವ್ಯವಹಾರಮಾಡಬೇಕು. ಇದು ಮಾನವಂತರಾದ ಪುರುಷರ ಕೊರಳಲ್ಲಿ ಹಾಕುವಾಗ ನಡೆಯುತ್ತವೆ, ಇದರಿಂದ ಅವನಿಗೆ ಪ್ರೇಮ, ಅಪ್ರೇಮ ಮುಂತಾದವುಗಳ ಕಲ್ಪನೆಯಾಗುತ್ತದೆ. ಆದರಂತೆ, ತೋರಿಸುವದಕ್ಕಾಗಿಯೂ ಇವುಗಳ ಉಪಯೋಗವಾಗುತ್ತದೆ. ಇದನ್ನು ಕಳಿಸಿಕೊಡುವದರಲ್ಲಿಯೂ ಬರುತ್ತದೆ.

**ತಾಂಬೂಲ ಸಂಕೇತ:** ಕೌಶಲ್ಯ, ಅಂಕುಶ, ಕಂದರ್ಪ, ಪರ್ಯಂಕ ಮತ್ತು ಚತುರಸ್ರವೆಂಬ ಐದು ಪ್ರಕಾರದ ಎಲೆ ಹಚ್ಚುವದಿದೆ. ಎಲೆಯ ಸಿರ ಮುಂತಾದವುಗಳನ್ನು ತೆಗೆದು ಕಟ್ಟುತ್ತಾರೆಯೋ ಅದಕ್ಕೆ ಕೌಶಲ್ಯವೆಂದು ಅನ್ನುತ್ತಾರೆ. ಅಂಕುಶದ ಆಕಾರದಂತೆ ಅಂಕುಶ, ಬಾಣದ ಆಕಾರದಂತೆ ಕಂದರ್ಪ (ಕಾಮ), ಹಾಸಿಗೆಯಂತೆ ಉದ್ದಕ್ಕೆ ಕಟ್ಟುವದೇ ಪರ್ಯಂಕ (ಪಲಂಗ) ಮತ್ತು ನಾಲ್ಕು ಕೋಣಗಳಿದ್ದದ್ದೇ ಚತುರಸ್ರ (ಚಕ್ರ). ಸ್ನೇಹಾದಿಕ್ಯದಲ್ಲಿ ಕೌಶಲ್ಯ, ತಮ್ಮವರಲ್ಲಿ ಅಂಕುಶ, ಕಾಮವಿಕಾರದಲ್ಲಿ ಕಂದರ್ಪ ಮತ್ತು ಸಂಭೋಗ ಸಂಕೇತಕ್ಕಾಗಿ ಪಲಂಗದಾಕಾರದ ತಾಂಬೂಲವನ್ನು ಕೊಡಲಾಗುತ್ತದೆ. ಕೆಲವೊಮ್ಮೆ ಇಲ್ಲವೆಂದು ಹೇಳುವದಕ್ಕಾಗಿ ಚೌಕು, ಅಪ್ರೀತಿಯನ್ನು ತೋರಿಸುವದಕ್ಕಾಗಿ ಅಡಿಕೆ ಹಾಕದ್ದು ಅಂದರೆ, ಪ್ರೇಮದಲ್ಲಿ ಅಡಿಕೆ,ಯಾಲಕ್ಕಿ ಕೂಡಿಸಿದ ತಾಂಬೂಲ

ವನ್ನು ಕೊಡಬೇಕು. ವಿಚ್ಛೇದದಲ್ಲಿ (ಬಿಡುಗಡೆ) ತಿರುವುಮುರವಾಗಿ ಹಾಕಿ ಕರೀ ದಾರದಿಂದ ಕಟ್ಟಿಕೊಡಬೇಕು. ಸಮಾಗಮ ಸಂಕೇತದಲ್ಲಿ ಒಂದು ಎಲೆಯ ಮೋರೆಯನ್ನು ಇನ್ನೊಂದು ಎಲೆಯ ಮೋರೆಯಿಂದ ಕೂಡಿಸಿ ಕೆಂಪು ದಾರದಿಂದ ಕಟ್ಟಬೇಕು. ಅತ್ಯಂತಿಕ ಪ್ರೇಮದಲ್ಲಿ ಚೂರು ಚೂರುಗಳನ್ನು ಕೂಡಿಸಿ ಒಳಗೆ ಕೇಸರಿಯ ಮತ್ತು ಹೊರಗೆ ಚಂದನದ ಲೇಪನವನ್ನು ಮಾಡಬೇಕು. ಯಾವ ಜನರಲ್ಲಿ ಆಗಂತುಕರಿಗಾಗಿ ಮನೆಯಿಂದ ತಾಂಬೂಲವು ತಯಾರಾಗಿ ಬರುತ್ತದೆಯೋ ಅಂತಹ ಚತುರ ನಾಗರಿಕರಲ್ಲಿ ಇದರ ವ್ಯವಹಾರವು ಬಳಕೆಯಲ್ಲಿದ್ದದ್ದು ಕಂಡುಬರುತ್ತದೆ. ಕೆಲವೊಂದು ವೇಳೆ ತಾಂಬೂಲದಲ್ಲಿ ಆಕಾರಸೂಚಕವಾದ ಬೇರೆ ವಸ್ತುಗಳೂ ಹೋಗುತ್ತವೆ.

**ವಸ್ತ್ರ ಸಂಕೇತ:** ಕಾಮವಿಕಾರದಿಂದ ಜರ್ಜರಿತವಾದುದನ್ನು ತೋರಿಸಬೇಕಾದರೆ ತೂತುಬಿದ್ದ ಅರಿವೆಯನ್ನು ಇಡಬೇಕು. ಅನುರಾಗದಲ್ಲಿ ಕೆಂಪು, ವೈರಾಗ್ಯದಲ್ಲಿ ಭಗವ ವಸ್ತ್ರವನ್ನಿಡಬೇಕು. ವಿಯೋಗವನ್ನು ಹೇಳುವದಕ್ಕಾಗಿ ಹರಕು ವಸ್ತ್ರ ಅದರಂತೆ ಕೂಡುವದಕ್ಕಾಗಿ ದಾರದಿಂದ ಕಟ್ಟಿದ್ದು, ಕಾಮದಶೆಯನ್ನು ತೋರಿಸುವದಕ್ಕಾಗಿ ಗಂಟು ಅದರಂತೆ ಒಬ್ಬನ ಸ್ನೇಹದಲ್ಲಿ ಒಂದು ಅನೇಕರ ಸ್ನೇಹದಲ್ಲಿ ಅನೇಕವಾಗಿ ಆಗಬೇಕು. ಉದಾ: ಚಿರಪ್ರಣಯಿನಿಯು ಅಟ್ಟದ ಮೇಲೆ ನಿಂತುಕೊಂಡಿದ್ದಾಳೆ ಅವಳ ಪ್ರೀತಿ ಪಾತ್ರನು ಕೂಡುವ ಸಮಯವನ್ನು ಕೇಳುತ್ತಿದ್ದಾನೆ ಆಗ ಇದು ನಡೆಯುತ್ತದೆ. ಇದರ ಪ್ರಯೋಗವು ದೊಡ್ಡ ದೊಡ್ಡವರ ಸ್ಥಳದಲ್ಲಿಯೂ ಕೂಡ ಒಮ್ಮೊಮ್ಮೆಯಾಗುತ್ತದೆ.

**ಗಂಟಿನ ಸಂಕೇತ:** ಪ್ರೇಮ ಸೂಚಕವನ್ನು ಮಾಡಲಿಕ್ಕೆಂದು ಸುಗಂಧಿ ದ್ರವ್ಯ ಮತ್ತು ಎಲೆ ಅಡಿಕೆ ಇವು ನಡೆಯುತ್ತವೆ. ಅತಿಪ್ರೇಮವನ್ನು ತೋರಿಸಲಿಕ್ಕೆ ಸಂಣ ಯಾಲಕ್ಕಿ, ಜಾಜೀಕಾಯಿ ಮತ್ತು ಲವಂಗ ಇವಾಗುತ್ತವೆ. ಪ್ರೇಮ ಭಂಗದಲ್ಲಿ ಹವಳ, ಚಿರಕಾಲ ಕೂಡುವಿಕೆಯಲ್ಲಿ ಹವಳದ ಜತೆ, ಕಾಮಜ್ವರದಲ್ಲಿ ಕಹಿಪದಾರ್ಥ ಅದರಂತೆ ಸಮಾಗಮದ ಇಚ್ಛೆಯಲ್ಲಿ ಒಣದ್ರಾಕ್ಷಿ ಇವು ನಡೆಯುತ್ತವೆ. ದೇಹ ಅರ್ಪಣದಲ್ಲಿ ಅರಳೆ, ಜೀವ ಅರ್ಪಣದಲ್ಲಿ ಜೀರಿಗೆ, ಭಯದಲ್ಲಿ ಕೇರಬೀಜ; ಭಯಾಭಾವದಲ್ಲಿ

ಬದಾಮ ಇವುಗಳ ಸಂಕೇತ ಮಾಡಬೇಕು. ಮೇಣದ ಗುಳಿಗೆಯನ್ನು ಮಾಡ್ಡಿ ಅದರ ಮೇಲೆ ಐದೂ ಬೆರಳುಗಳ ಉಗುರಿನಿಂದ ಗುರುತನ್ನು ಮಾಡಬೇಕು. ಅದರಮೇಲೆ ಕೆಂಪು ದಾರವನ್ನು ಸುತ್ತಿದರೆ ಅದಕ್ಕೆ ಗಂಟು ಎಂದು ಅನ್ನುತ್ತಾರೆ. ಮೇಣವು ಕಾಮದಶೆಯನ್ನು ತೋರಿಸುತ್ತದೆ; ಅದರಂತೆ ಕೆಂಪು ದಾರವು ಅನುರಾಗವನ್ನು ಸೂಚಿಸುತ್ತದೆ ಮತ್ತು ಐದೂ ಬೆರಳಿನ ಗುರುತು ಕಾಮದೇವನ ಐದು ಬಾಣಗಳನ್ನು ಸೂಚಿಸುತ್ತವೆ.

## ಅಭಿಯೋಗ ಪ್ರಕರಣ

> **ಕೃತಪರಿಚಯಾಂ ದರ್ಶಿತೇಂಗಿತಾಕಾರಾಂ ಕನ್ಯಾವದಭಿಯುಂಜೀತೇತಿ। ಪ್ರಾಯೇಣ ತತ್ರ ಸೂಕ್ಷ್ಮಾ ಅಭಿಯೋಗಾ।ಕನ್ಯಾನಾಮಸಂಪ್ರಯುಕ್ತತ್ವಾತ್। ಇತರಾಸು ತಾನೇವ ಸ್ಫುಟಮುಪದಧ್ಯಾತ್। ಸಂಪ್ರಯುಕ್ತತ್ವಾತ್ ॥**

ಯಾವಳ ಕೂಡ ಪರಿಚಯವಾಗಿದೆಯೋ, ಯಾವಳು ತನ್ನ ಇಂಗಿತಾಕಾರಗಳನ್ನು ತೋರಿಸಿರುತ್ತಾಳೋ ಅವಳನ್ನು ಕನ್ಯೆಯಂತೆ ಉಪಾಯದಿಂದ ಒಲಿಸಿಕೊಳ್ಳಬೇಕು. ಬಹುತರವಾಗಿ ಇದರಲ್ಲಿ ಸೂಕ್ಷ್ಮವಾದ ಅಭಿಯೋಗಗಳಾಗುತ್ತವೆ. ಏಕೆಂದರೆ ಕನ್ಯೆಯರು ತಾವೇತಾವಾಗಿ ಏತಕ್ಕೂ ತಯಾರಾಗುವದಿಲ್ಲ; ಆದರೆ ಬೇರೆ ನಾಯಿಕೆಯರಲ್ಲಿ ಅವನ್ನು ಸ್ಫುಟವಾಗಿ ಪ್ರಯುಕ್ತಮಾಡಬೇಕು, ಏಕೆಂದರೆ ಅವರು ಅನುಭವಿಕರೇ ಇರುತ್ತಾರೆ.

ಯಾವಳು ತನ್ನ ಪ್ರೇಮ ಮತ್ತು ತುಂಬಿದ ಭಾವಗಳನ್ನು ವ್ಯಕ್ತ ಮಾಡಿರುತ್ತಾಳೋ ಅಂತಹ ನಾಯಿಕೆಯ ವಸ್ತುಗಳನ್ನು ತಾನು ಉಪಭೋಗಿಸಬೇಕು ಮತ್ತು ತನ್ನವನ್ನು ಅವಳಿಗೆ ಉಪಭೋಗಿಸಲಿಕ್ಕೆ ಕೊಡಬೇಕು. ಈ ಸಂಗತಿಗಳು ತನ್ನ ಹಾಗೂ ಅವಳಲ್ಲಿ ಭೇದವಿರದಾಗ ಮಾಡುವಂಥವು.

ಯಾವಾಗ ತನ್ನ ಕಡೆಗೆ ಒಲಿಯಹತ್ತುವಳೋ ಆಗ ಸುಗಂಧಿ ದ್ರವ್ಯ, ಮೇಲೆ ಹೊದ್ದುಕೊಳ್ಳಲು ಶಾಲು (ಉತ್ತರೀ), ಹೂವು ಮತ್ತು ಉಂಗುರ ಇವುಗಳನ್ನು ನಾಯಿಕೆಯು ಕೊಡಬಂದರೆ, ತಕ್ಕೊಳ್ಳಬೇಕು. ಯಾವಾಗ

ಅವಳು ತನ್ನ ಕೈಯ ತಾಂಬೂಲವನ್ನು ತಿನ್ನುವಷ್ಟು ಒಲಿಯುತ್ತಾಳೋ ಅದರ ನಂತರ, ಕಥಾ-ನಾಟಕ ಪ್ರಸಂಗ್ಗಗಳಿಗೆ ಹೋಗುವ ತಯ್ಯಾರಿಯ ಸಮಯ ಪೂರ್ವದಲ್ಲಿ ಅವಳ ಮುಡಿಯಲ್ಲಿ ಕಟ್ಟಿದ ಹೂವನ್ನು ಅದು ತನಗೆ ಜಯಪ್ರದವಾಗಬಹುದೆಂದು ಹೇಳಿ ಇಸಿದುಕೊಳ್ಳಬೇಕು.

ಯಾವಾಗಾದರೂ ಅವಳು ಬೇಡಿದ ವಸ್ತುಗಳನ್ನು ಕೊಡುವ ಮುನ್ನ ಅವುಗಳ ಮೇಲೆ ಉಗುರು ಹಾಗೂ ಹಲ್ಲಿನಿಂದ ಗುರುತುಮಾಡಿ ಕೊಡಬೇಕು. ಈ ಕೊಡುವದು ಸ್ವಯಂ ತಾನೇ ಆಗಿ ಇರಲಿ ಇಲ್ಲವೆ ಅನ್ಯರ ಕೈಯಿಂದಲೇ ಇರಲಿ, ಯಾವಾಗಲೂ ಗುರುತು ಮಾಡಿಯೇ ಕೊಡಬೇಕು, ಅಂದರೆ ಅದು ಅರ್ಥಸೂಚಕವಾಗುತ್ತದೆ.

ಬಹುತರವಾಗಿ ಪರಸ್ತ್ರೀಯರು ಪರಪುರುಷರಲ್ಲಿ ಭಯಭೀತರಾದಂತೆ ಮಾಡುತ್ತಾರೆ, ಅದಕ್ಕಾಗಿ ಮೊದಲು ಮೊದಲಿಗೆ ಸಾವಕಾಶವಾಗಿ ಆಮೇಲೆ ಹೆಚ್ಚಾಗಿ ಉಪಾಯ ಯೋಜನೆಯನ್ನು ಮಾಡಬೇಕು.

**ಭೀತಿಗೆ ಉಪಾಯ:** ಕ್ರಮದಂತೆ ಏಕಾಂತದಲ್ಲಿ ಹೋಗಬೇಕು, ಆಲಿಂಗನ, ಚುಂಬನ, ತಾಂಬೂಲ ಮುಂತಾದವುಗಳನ್ನು ಕೊಟ್ಟನಂತರ ಸುಗಂಧ ದ್ರವ್ಯಗಳನ್ನು ಲೇಪಿಸಬೇಕು. ಅದರ ನಂತರ ಗುಹ್ಯ, ಕಂಕುಳ, ಕುಚ, ಜಘನ ಮುಂತಾದವುಗಳನ್ನು ಮರ್ದಿಸಬೇಕು.

**ಕೂಡಬಾರದಂಥ ಸ್ಥಳಗಳು:** ಯಾವ ಮನೆಯಲ್ಲಿ ಓರ್ವ ಸ್ತ್ರೀಯಳನ್ನು ಕೂಡಲಾಗಿದೆಯೋ ಆ ಮನೆಯಲ್ಲಿ ಇನ್ನೊಬ್ಬಳನ್ನು ಕೂಡಬಾರದು.

ಯಾವ ಮನೆಯಲ್ಲಿ ತಂದು ತನಗೆ ಕೂಡುವದಿದೆಯೋ ಆ ಮನೆಯಲ್ಲಿ ತಾರುಣ್ಯದಲ್ಲಿ ಬಹಳವಾಗಿ ಇಂತಹ ಕೆಲಸಗಳನ್ನು ಮಾಡಿದ ಮುದುಕಿಯಿದ್ದರೆ ಅವಳಿಗೂ ಇಷ್ಟ ವಸ್ತುಗಳನ್ನು ಕೊಟ್ಟು ತನ್ನವಳನ್ನಾಗಿ ಮಾಡಿಕೊಳ್ಳಬೇಕು. ಅವಳಿಂದಲೇ ಇನ್ನೊಬ್ಬಳನ್ನು ಒಲಿಸಿಕೊಳ್ಳಲಿಕ್ಕೆ ಅವಳನ್ನೇ ಸಾಧನವನ್ನಾಗಿ ತಯಾರು ಮಾಡಿದಂತೆಯಾಗುತ್ತದೆ. ಇವುಗಳಿಂದಲೇ ಅವಳು ಒಲಿಯುತ್ತಾಳೆ. ಅವಳು ಒಲಿದನಂತರ ಅವಳ ಮನೆಯಲ್ಲಿಯೇ ಈ ಕೆಲಸಗಳನ್ನು ಮಾಡಬೇಕು.

**ವ್ಯಭಿಚಾರದ ಸ್ಥಳಗಳು:** ಸೆಜ್ಜೆ, ಜೋಳ ಮುಂತಾದ ಪೈರುಗಳು ದಟ್ಟವಾಗಿ ಬೆಳೆದ ಹೊಲಗಳು, ಮನೆಯ ತೋಟ, ಹಾಳು ಬಿದ್ದ ಗುಡಿ ಹಾಗೂ ಮನೆ, ದೂತಿಯರ ಮನೆಗಳು, ತೋಟಿಗ ಮುಂತಾದವರ ಮನೆಗಳು, ಸ್ಮಶಾನ, ಕೊಳೆ–ಗುಹೆ ಮುಂತಾದ ಏಕಾಂತದ ಸ್ಥಳಗಳು ವ್ಯಭಿಚಾರಿಣಿಯರ ವ್ಯಭಿಚಾರದ ಸ್ಥಳಗಳಾಗುತ್ತವೆ. ಇಲ್ಲವೆ ಸ್ಥಳಗಳಕ್ಕಿಂತಲೂ ದೂತಿಯರ ಮನೆಗಳಲ್ಲಿಯೇ ಹೆಚ್ಚಾಗಿ ಸೌಲಭ್ಯವು ಸಿಕ್ಕುತ್ತದೆ. ಅದರಲ್ಲಿಯೂ ಯಾವ ದೂತಿಯರ ತಾರುಣ್ಯವು ಇಳಿಮುಖವಾಗಿದೆಯೋ ಅವರ ಮನೆಗಳಲ್ಲಿ ಇದಕ್ಕೂ ಹೆಚ್ಚಿನ ಸೌಲಭ್ಯ. ಇದಕ್ಕಾಗಿಯೇ ಸೂತ್ರಕಾರರು ದೂತಿಯರ ಮನೆಗಳಲ್ಲಿ ನಿರ್ವಿಕಾರ ಭಾವದಿಂದ ಹೋಗುವ ಸಂಪನ್ನರೂ ಕೂಡ ಇಂತಹ ಕೆಲಸಗಳನ್ನು ಒಮ್ಮೊಮ್ಮೆ ಮಾಡುತ್ತಿರುತ್ತಾರೆಂದು ಹೇಳುತ್ತಾರೆ. ಸರಕಾರದ ಇಷ್ಟೋಂದು ನಿರ್ಬಂಧಗಳಿದ್ದರೂ ಕೂಡ ಕುಂಟಲಗಿತ್ತಿಯರವ್ಯವಹಾರವು ನಿರಾಂತಕವಾಗಿ ನಡೆದೇ ಇದೆ. ಒಮ್ಮೊಮ್ಮೆ ಇಲ್ಲಿ ದೊಡ್ಡ ರೋಮಾಂಚಕಾರಿಯಾದ ಸಂಗತಿಗಳೂ ಜರಗುತ್ತಿರುತ್ತವೆ. ಹಳ್ಳಿಗಳಲ್ಲಿ ಹೊಲ ಮುಂತಾದವುಗಳು ವ್ಯಭಿಚಾರದ ಸ್ಥಾನಗಳಿದ್ದರೆ, ಪಟ್ಟಣಗಳಲ್ಲಿ ಕುಂಟಲಗಿತ್ತಿಯರೇ ವ್ಯಭಿಚಾರದ ಆಗರರೆಂದು ನಿರ್ಭಯವಾಗಿ ಹೇಳಬಹುದು. ಪ್ರಿಯತಮರನ್ನು ಪ್ರಸನ್ನರನ್ನಾಗಿ ಮಾಡಿಕೊಡುವ ಕುಂಟಲಗಿತ್ತಿಯರ ಸಂಖ್ಯೆಯನ್ನಾಗಲೀ ಪರಿಚಯವನ್ನಾಗಲೀ ಹೇಳುವದೂ ಕೂಡ ಈಗ ಕಠಿಣವಿದೆ. ಅನೇಕ ಸ್ತ್ರೀಯರು ವಚನಬದ್ಧರಾಗಿಯೂ ಕುಂಟಲತನದ ವ್ಯವಹಾರ ಮಾಡುತ್ತಿರುವದು ಕಂಡುಬರುತ್ತದೆ. ಯಾವವು ವ್ಯವಸ್ಥಿತವಾದ ಮನೆಗಳಿವೆಯೋ (ಸೂಳೆಗೇರಿ) ಅವಕ್ಕೆ ಕುಂಟಲತನದ ಮನೆಗಳೆಂದು ಕರೆಯಲಿಕ್ಕೆ ಬರಲಿಕ್ಕಿಲ್ಲ. ಪರಕೀಯ ಸ್ತ್ರೀ-ಪುರುಷರು ಇಂತಹ ಮನೆಗಳಲ್ಲಿ ನಿರ್ಭೀತಿಯಿಂದ ಕಲೆಯಬಹುದು. ಈ ವಿಷಯಕ್ಕೆ ಇನ್ನೂ ಎರಡು ಶ್ಲೋಕಗಳಿವೆ. ಅವುಗಳ ಸಾರವೇನೆಂದರೆ:—

ಯಾವ ಮನೆಯಲ್ಲಿ ನಾಯಿಕೆಯ ಪತಿಯು ಬೇರೆ ಯಾವಳಾದರೂ ಸ್ತ್ರೀಯ ವ್ಯಭಿಚಾರವನ್ನು ನೋಡಿದ್ದರೆ ಅಥವಾ ಕೇಳಿದ್ದರೆ ಆ ಮನೆಯಲ್ಲಿ ಸುಲಭಸಾಧ್ಯಳೂ ಕೂಡೂ ಕೆಲೆಯಬಾರದು.

ಯಾವಳಿಗೆ ಉಪಾಯಗಳನ್ನು ಮಾಡುವದರಲ್ಲಿ ಸಂಶಯವಿದೆಯೋ, ಯಾವಳನ್ನು ಸಂರಕ್ಷಿಸುವದಕ್ಕಾಗಿ ಸಶಸ್ತ್ರ ವ್ಯಕ್ತಿಯಿದ್ದಾನೋ, ಯಾವಳು

ಘಟಿಗೆ ಅಂಜುತ್ತಾಳೋ, ಯಾವಳ ಅತ್ತೆಯು ಅವಳ ಹತ್ತಿರ ಸದಾ ಕಾಲವೂ ಇರುತ್ತಾಳೋ ಅಂಥವಳ ವಿಷಯಕ್ಕೆ ಎಂದೂ ಕೈಯನ್ನೇ ಹಾಕಬಾರದು, ಏಕೆಂದರೆ ಇಂಥವರು ಎಂತಹ ಪ್ರಯತ್ನದಿಂದಲೂ ಕೂಡ ಅಸಾಧ್ಯರು.

ಇದರಂತೆ ಅಭಿಯೋಗ ನಾಮಕ ೪೪ನೇ ಪ್ರಕರಣ ಸಮಾಪ್ತ.

---

## ಅಧ್ಯಾಯ : ೨

# ಭಾವ ಪರೀಕ್ಷಾ ಪ್ರಕರಣ

ಅಭಿಯೋಗವಾದ ನಂತರವೂ ಹೆಚ್ಚು ಸೂಕ್ಷ್ಮವಾಗಿ ಪರೀಕ್ಷೆ ಮಾಡುವಂತಹ ಕೆಲವೊಂದು ಸ್ತ್ರೀಯರಿದ್ದಾರೆ, ಇಂಥವರು ತಮ್ಮ ಭಾವನೆಗಳನ್ನು ತೀವ್ರವಾಗಿ ಪ್ರಕಟಮಾಡುವದಿಲ್ಲ. ಅದಕ್ಕಾಗಿ ಅವರಿಗೆ ವಿಶೇಷವಾಗಿ ಅಭಿಯೋಗಗಳನ್ನು ಮಾಡಬೇಕಾಗುತ್ತದೆ. ಕಾರಣ, ಅಭಿಯೋಗ ಮಾಡುತ್ತಿರುವಾಗ ಸ್ತ್ರೀಯಳ ಪ್ರವೃತ್ತಿಯನ್ನು ಪರೀಕ್ಷಿಸಬೇಕು, ಅದರಿಂದ ಭಾವ ಪರೀಕ್ಷೆಯಾಗುತ್ತದೆ. ಅವಳೇನಾದರೂ ಅಭಿಯೋಗ (ಉಪಾಯ) ಮಾಡಿದರೆ ಅದಕ್ಕೆ ಉತ್ತರ ಕೊಡಬೇಕು. (ಇಲ್ಲಿ ಪ್ರವೃತ್ತಿಯ ಅರ್ಥ ಚೇಷ್ಟೆಯೆಂದು ಇದೆ. ಚೇಷ್ಟೆಯು ಭಾವಗಳಿಂದಲೇ ಉದ್ಭೂತವಾಗುತ್ತಿರುವದರಿಂದ ಅದನ್ನು ಪರೀಕ್ಷಿಸುವದರಿಂದ, ಭಾವಪರೀಕ್ಷೆಯನ್ನು ಮಾಡಿದಂತೆಯೇ ಆಗುತ್ತವೆ. ಇದನ್ನು ಆಧುನಿಕ ಮನೋವಿಜ್ಞಾನವೂ ಒಪ್ಪುತ್ತದೆ. ವಾತ್ಸ್ಯಾಯನನು ಮನೋವಿಜ್ಞಾನ ವಿಶಾರದನಿದ್ದನೆಂದು ಇದರಿಂದ ಸ್ಪಷ್ಟವಾಗುತ್ತದೆ. ಅನು.)

ಯಾವಳು ತಾನೇ-ತಾನಾಗಿಯೇ ಭಾವಗಳನ್ನು ಪ್ರಕಟ ಮಾಡುವದಿಲ್ಲವೋ ಅಂಥವಳನ್ನು ದೂತಿಯಿಂದ ಸಿದ್ಧಮಾಡಿಕೊಳ್ಳಬೇಕು. ಏಕೆಂದರೆ, ಪ್ರಗಲ್ಭರಾದ ಸ್ತ್ರೀಯರು ದೂತಿದ್ವಾರದಿಂದ ಕೈಗೆ ಹತ್ತುತ್ತಾರೆ.

ನಾಯಕನು ಮಾಡಿದ ಚೇಷ್ಟೆಗಳಿಗೆ ಪ್ರತಿಚೇಷ್ಟೆಗಳನ್ನು ಮಾಡಿಯೂ ಕೆಲವೊಂದು ದಿನ ತಡೆದು, ತಿರುಗಿಯೂ ನಾಯಕನ ಕೂಡ ಚೇಷ್ಟೆಗಳನ್ನು ಮಾಡುವಂಥವಳನ್ನು ಕ್ರಮವಾಗಿ ಸಿದ್ಧ ಮಾಡಿಕೊಳ್ಳಬೇಕು.

**ಬಲಾತ್ಕಾರದವಳು:** ಯಾವಳು ಚೇಷ್ಟೆಗಳನ್ನು ನೋಡಿಯೂ ನೋಡದಂತೆ ಮಾಡಿ, ಭೆಟ್ಟಿಯಾದ ಸಲಕ್ಕೊಮ್ಮೆ ಮೊದಲ ಭೆಟ್ಟಿಯ ಕ್ಕಿಂತಲೂ ಹೆಚ್ಚಾಗಿ ತನ್ನನ್ನು ಸಿಂಗರಿಸಿಕೊಂಡಿರುತ್ತಾಳೋ ಅಂಥವಳ ಎದುರಿಗೆ ತಾನೂ ತನ್ನನ್ನು ಸಿಂಗರಿಸಿಕೊಂಡು ಹೋಗಬೇಕು. ಅವಳನ್ನು ಏಕಾಂತದಲ್ಲಿ ತರುಬಿದರೆ ಬಲಾತ್ಕಾರಕ್ಕೆ ಒಪ್ಪುವವಳೆಂದು ತಿಳಿಯಬೇಕು.

**ಅತ್ಯಂತ ಪರಿಚಯದಿಂದ ಸಾಧ್ಯಳು:** ಯಾವಳು ಬಹಳವಾಗಿ ಮಾಡಿದ ಚೇಷ್ಟೆಗಳನ್ನು ತಿಳಿದುಕೊಂಡೂ ಮತ್ತು ಇದರಂತೆ ಬಲುದಿನ ಗಳ ತನಕ ನೋಡುತ್ತ ಬಂದೂ ಸಹ ತನ್ನ ಶರೀರವನ್ನು ಸ್ವಾಧೀನಮಾಡಲು ಒಪ್ಪದಿದ್ದರೆ ಅಂಥವಳದು ಒಣಚೇಷ್ಟೆ, [ಬಳಕೆಯ ಮಾತಿನಲ್ಲಿ ಇದನ್ನು ಈಗ ನಮ್ಮ ಕಡೆಗೆ 'ಜಪಾನ ಬಿಜಿನೆಸ್' ಎಂದು ಕರೆಯುವ ರೂಢಿ ಬಿದ್ದಿದೆ ಅನು.) ಇವಳು ಅತ್ಯಂತ ಪರಿಚಯದಿಂದ ಸಿದ್ಧಳಾಗುತ್ತಾಳೆ.

ಸಿಕ್ಕರೂ ಕೂಡ ಸಮಾಗಮಕ್ಕೆ ಒಪ್ಪದೇ ಬಿಟ್ಟು ಬಿಡುತ್ತಾಳಲ್ಲದೆ, ಚೇಷ್ಟೆಗೆ ಪ್ರತಿಚೇಷ್ಟೆಯನ್ನು ಮಾಡದ ಇಬ್ಬರ ವಿಷಯದಲ್ಲಿಯೂ ಗೌರವ ದಿಂದ ವ್ಯವಹರಿಸುತ್ತಾಳೆ. ಅಂಥವಳು ಪರಿಚಯವಾದ ನಂತರ ಅತ್ಯಂತ ತ್ರಾಸಿನಿಂದ ಸಿಗುತ್ತಾಳೆ. ಇಂಥವಳನ್ನು ಚತುರ ದೂತಿಯಿಂದ ಸಾಧ್ಯ ಮಾಡಿಕೊಳ್ಳಬೇಕು.

**ಉಪೇಕ್ಷಣೀಯಳು:** ಯಾವಳು ತನ್ನ ನಿರಾಕರಣೆಯನ್ನು ಕಠೋರ ಶಬ್ದಗಳಿಂದ ಮಾಡುತ್ತಾಳೋ, ಅಂಥವಳ ಮೇಲೆ ತಿರಸ್ಕಾರದ ದೃಷ್ಟಿ ಯಿಂದ ಉಪಾಯ ಮಾಡಬೇಕು.

**ಅವರಲ್ಲಿಯೂ ವಿಶೇಷ:** ದುರ್ವಾ ಸ್ವಭಾವವು ಮೊದಲಿಗೆ ಕಠೋರ ವಾಕ್ಯಗಳಿಂದ ನಿರಾಕರಣೆಮಾಡಿ ನಂತರ ಪ್ರೀತಿ ಕೂಡಿಸಲು ನೋಡು ತ್ತಾಳೋ ಅಂಥವಳನ್ನು ಮತ್ತೆ ವಶಮಾಡಿಕೊಳ್ಳುವ ಪ್ರಯತ್ನಮಾಡಬೇಕು. ಏಕೆಂದರೆ, ಅವನು ಅವಳ ವಿಶ್ವಾಸಪಾತ್ರನೇ ಆಗಿರುತ್ತಾನೆ.

**ಸಹನಶೀಲತೆಯಿಂದ ಸಿದ್ಧಳಾಗುವವಳು:** ಯಾವದಾದರೂ ಒಂದು ಕೆಲಸದ ನಿಮಿತ್ಯ ಇಲ್ಲವೆ ಯಾವದಾದರೊಂದು ಕಾರಣವನ್ನು ಹುಡುಕಿ ಯಾವಳು ಅಭಿಯೋಗಗಳನ್ನು ಸಹಿಸಿಕೊಳ್ಳುತ್ತಾಳೋ ಅವಳು ಒಣ ಸ್ವೀಕಾರವನ್ನು ಮಾತ್ರ ಮಾಡುತ್ತಾಳೆ. ಯಾವಳು ನಾಯಕನ ಅಭಿಪ್ರಾಯಗಳು ತನಗೆ ತಿಳಿಯುವದಿಲ್ಲೆಂಬ ಸೋಗಿನಿಂದ ಸ್ಪರ್ಶ ಮತ್ತು ಅಭಿಯೋಗಗಳನ್ನು ಸಹಿಸಿಕೊಳ್ಳುತ್ತಾಳೋ ಅಂಥವಳು ಯಾವದೇ ತರದ ನಿಶ್ಚಯವಿಲ್ಲದೆ ಮಧ್ಯದಲ್ಲಿ ತೊಳಲಾಡುತ್ತಿದ್ದಾಳೆಂದು ತಿಳಿಯಬೇಕು. ಅವಳು ಚಿರಕಾಲದ ತನಕ ಪರೀಕ್ಷಾಯೋಗ್ಯಳಿದ್ದಾಳೆಂದೂ ಇಲ್ಲವೆ ಅವಳೂ ಕೂಡ ಯಾರನ್ನಾದರೂ ಒಲಿಸಿಕೊಳ್ಳಬೇಕೆನ್ನುತ್ತಾಳೆಂದೂ ಊಹಿಸಬೇಕು. ಇಂಥವಳನ್ನು ಯಾವಾಗಲೂ ಶಾಂತಿ (ಸಹನತೆ) ಯಿಂದಲೇ ಒಲಿಸಿಕೊಳ್ಳಬೇಕು. ಅಂದರೆ, ನಿರಂತರವೂ ಸ್ಪರ್ಶ ಮತ್ತು ಚೇಷ್ಟೆ ಇವುಗಳನ್ನವಳು ಸಹಿಸಿಕೊಳ್ಳುವಂತೆ ಮಾಡಬೇಕು. ಉಪಾಯುಗಳಿಂದ ಗೊಂದಲವಾಗಗೊಡಬಾರದು.

**ಅಧಿಕಾಂಕ್ಷಣೆಯ ಪರಿಚಯ:** ಸಮೀಪದಲ್ಲಿ ಮಲಗಿದವಳ ಚೇಷ್ಟೆಗಳ ಪರೀಕ್ಷೆಯನ್ನು ಬಾಹ್ಯ ಅಭಿಯೋಗಳಿಂದ ಮಾಡಿಕೊಳ್ಳಬೇಕು. ಸಮೀಪದಲ್ಲಿ ಮಲಗಿದವಳ ಮೇಲೆ ಯಾವಾಗ ಮಲಗುವವನು ನಿದ್ರೆ ಹೋಗುವ ನೆವದಿಂದ ಅವಳ ಮೇಲೆ ಕೈಯನ್ನು ಚೆಲ್ಲುತ್ತಾನೋ ಆಗ, ಅವನು ನಿದ್ರೆಯಲ್ಲಿರುತ್ತಾನೆಂದು ಅವಳು ಅದನ್ನು ಸಹಿಸಿಕೊಳ್ಳುತ್ತಾಳೆ. ಆದರೆ ಅವನ ನಿದ್ರೆಯು ಸೋಗಿನದಿದೆಯೆಂದು ತಿಳಿದರೆ ಆಗ ತನ್ನನ್ನು ಎಚ್ಚರಿಸುವ ಉದ್ದೇಶದಿಂದ ಕೈಯನ್ನು ಚೆಲ್ಲಿದ್ದಾನೆಂದು ತಿಳಿದು ಅದನ್ನು ದೂರ ಸರಿಸುತ್ತಾಳೆ. ಹೀಗೆ ತೆಗೆದೊಗೆಯುವ ಕಾರಣವೇನೆಂದರೆ,ಅವಳಿಗೆ ಹೆಚ್ಚಿನ ಚೇಷ್ಟೆಗಳ ಅಪೇಕ್ಷೆಯಾಗಿರುತ್ತದೆ. ಇಲ್ಲವಾದರೆ ನಿಜವಾಗಿ ನಿದ್ರೆ ಹೋದವನು (ಮುದ್ದಾಂ) ಚೆಲ್ಲಿದನೋ ಎಂಬುವ ಸಂದೇಹವುಳಿಯುತ್ತದೆ. ಕೈಗಳನ್ನು ಚೆಲ್ಲುವಂತೆ ಕಾಲುಗಳನ್ನೂ-ಕಾಲುಗಳ ಮೇಲೆ ಚೆಲ್ಲುವದಿರುತ್ತದೆ. ಅದನ್ನೇ ಇನ್ನು ಮುಂದೆ ಹೇಳುತ್ತಾರೆ.

**ಸುಪ್ತಾಲಿಂಗನ:** ಮೈಮೇಲೆ ಕೈ, ಕಾಲುಗಳ ಮೇಲೆ ಕಾಲು ಚೆಲ್ಲಿದ ನಂತರ ಮಲಗಿದಂತೆ (ಸುಪ್ತ) ಯೇ ಆಲಿಂಗನವನ್ನು ಸುರುಮಾಡಬೇಕು.

ಯಾವಾಗ ಆನಂದೋದ್ದೇಶವಿಲ್ಲದೆ ಕೇವಲ ಪೀಡಿಸುವ ಉದ್ದೇಶದಿಂದ ಕೈ-ಕಾಲುಗಳನ್ನು ಚಲ್ಲಹತ್ತಿದರೆ ರೋಗಿನಿಂದ ನಿದ್ರೆಹೋಗುವವಳನ್ನು ಆಲಿಂಗಿಸಬೇಕು ಮತ್ತು ಕ್ರಮಶಃ ಚುಂಬನಾದಿಗಳನ್ನು ಮಾಡಬೇಕು.

**ಮಾನಿನೀಯಳು:** ಆಲಿಂಗನಗಳು ಸಹಿಸದೆ ಹಾಸಿಗೆಯಿಂದ ಎದ್ದು ಹೋಗಿ, ಮರುದಿನ ಯಾವ ಬೇಸರವೂ ಇಲ್ಲದೆ ಶಾಂತಳಾಗಿ ಕಂಡು ಬಂದರೆ, ಅವಳು ಚೇಷ್ಟೆಗಳನ್ನಪೇಕ್ಷಿಸುತ್ತಾಳೆಂದು ತಿಳಿಯಬೇಕು. ಅದ ಕ್ಕಾಗಿ ಮತ್ತೆ ಚೇಷ್ಟೆಗಳನ್ನು ಮಾಡಬೇಕು. ಇದರಿಂದ ಅವಳು ಮಾನಿ ನೀಯಳಿದ್ದಾಳೆಂದು ತಿಳಿಯಬೇಕು. ಯಾವಳು ಮರುದಿನ ಸಪ್ಪಗೆ ಕಂಡು ಬರುತ್ತಾಳೋ, ಅವಳನ್ನು ದೂತಿಯರಿಂದ ಸಿದ್ಧಮಾಡಿಸಿಕೊಳ್ಳಬೇಕು. ಯಾಕೆಂದರೆ ಇದು ದೂತಿಯರಿಗೆ ಯೋಗ್ಯವಾದದ್ದು.

ಇದರಂತೆ ಚೇಷ್ಟೆಗಳು ಸಹನವಾಗದೆ ಎದ್ದು ಹೋದ ನಾಯಿಕೆಯು ಮರುದಿನ ಭೆಟ್ಟಿಯಾಗದೆ ಬಲುದಿನಗಳ ನಂತರ ಭೆಟ್ಟಿಯಾದಾಗ ಸಹಜ ವಾದ ಭಾವನೆಗಳಿಂದ ಸಂಸರ್ಗವನ್ನು ಮಾಡುತ್ತಾಳೆ. ಇದರಂತೆ ಮಾಡಿ ದರೂ ಕೂಡ ಹಾವ-ಭಾವಗಳನ್ನು ಪರೀಕ್ಷಿಸಿ, ಸಂಧಿಯನ್ನು ಸಾಧಿಸಿ ವಶಮಾಡಿಕೊಳ್ಳಬೇಕು. ಯಾಕೆಂದರೆ, ಅವಳು ಅತ್ಯಂತ ಮಾನಿನೀಯ ಳಿದ್ದಾಳೆ.

**ಅಪೇಕ್ಷಿಸುವವಳು:** ಸಮಾಗಮವಾಗಿರಲಿ ಅಥವಾ ಆಗದೇ ಇರಲಿ, ತನ್ನ ಉದ್ದೇಶಸೂಚಕವಾದ ಮುಖ-ಕಂಣುಗಳಲ್ಲಿ ಆಕಾರಗಳನ್ನು ತೋರಿಸು ತ್ತಾಳೆ ಮತ್ತು ಏಕಾಂತದಲ್ಲಿ ತನ್ನ ಶರೀರದ ಗುಹ್ಯಾಂಗಗಳನ್ನೂ ಕೂಡ ತೋರಿಸುತ್ತಾಳೆ: ಅವಳು ನಡಗುತ್ತ-ನಡಗುವ ಸ್ವರದಿಂದ ಮಾತನಾಡು ತ್ತಾಳೆ. ಹೃದಯದಲ್ಲಿ ಒಮ್ಮಿಂದೊಮ್ಮೆ ಸಾತ್ವಿಕ ಭಾವಗಳ ಉದಯವಾದ ನಂತರ ಈ ಅಂಗಗಳ ಮೇಲೆ ಬೆವರು ಬರುತ್ತದೆ. ಭಾವಗಳಲ್ಲಿ ಆಕಾರ ವಾದರೂ ಇದರಂತೆಯೇ ಆಗಹತ್ತುತ್ತದೆ.

**ಅಪೇಕ್ಷಿಸುವವಳ ಕಾಲುಗಳನ್ನು ತುಳಿಯಬೇಕು:** ಕಾಮಾತುರ ಳಾದ ನಾಯಿಕೆಯು ಯಾವಾಗ ಕಾಲನ್ನು ಒತ್ತುತ್ತಾಳೋ ಆಗ ಒಂದು ಕೈಯಿಂದ ಕಾಲನ್ನು ತಿಕ್ಕಹತ್ತುತ್ತಾಳಲ್ಲದೆ ಇನ್ನೊಂದು ಕೈಯಿಂದ ಸ್ಪರ್ಶ ಮಾಡುತ್ತ ಹೋಗುತ್ತಾಳೆ. ಈ ಸ್ಪರ್ಶದಿಂದ ನಾಯಕನ ಮೇಲೆ ತನ್ನ

ಪ್ರೀತಿ ಎಷ್ಟಿದೆಯೆಂಬುದನ್ನು ತೋರಿಸುವ ಪ್ರಯತ್ನ ಮಾಡುತ್ತಾಳೆ. ಸ್ಪರ್ಶವು ಹೆಚ್ಚಿದಂತೆ ಅವಳ ಮೈಯಲ್ಲಿ ನಡುಗುಡವು ಹೆಚ್ಚುತ್ತ ಹೋಗುತ್ತದೆ. ನಡುಗುಡ ಹುಟ್ಟುವ ಕಾರಣವೇನೆಂದರೆ, ಆವನು ಯಾವ ತರದ ಮನುಷ್ಯನಿದ್ದಾನೆಂಬುದರ ಅರಿವು ಅವಳಿಗಾಗಿರುವದಿಲ್ಲ. ಈ ನಡುಗುಡ ಸಮಸಾರ್ಥ್ಯವಾಗಿಯೇ ಇನ್ನೊಂದು ಕೈಯಿಂದ ಸ್ಪರ್ಶಮಾಡು (ಘಸ್ಪಡಿಸು) ತ್ತಿರುತ್ತಾಳೆ.

ಇಲ್ಲವೆ ನಿದ್ರಾಂಧಳಾಗಿ ಎರಡೂ ಕೈಗಳಿಂದ ಘಟ್ಟಿಯಾಗಿ, ಆಲಿಂಗಿಸಿಯೂ ಎದೆಯ ಮೇಲೆ ನೇವರಿಸಿ ನಿಲ್ಲಿಸುತ್ತಾಳೆ. ತನ್ನ ಹಣೆಯ ಒಂದು ಬದಿಯನ್ನು ನಾಯಕನ ವಕ್ಷಸ್ಥಲದಮೇಲಿಡುತ್ತಾಳೆ. ತೊಡೆ ತಿಕ್ಕುತ್ತಿರುವ ಕೈಯನ್ನು ಜಘನದ ಕಡೆಗೆ ಒಯ್ಯಲು ಇಚ್ಛಿಸುತ್ತಾಳೆ, ಕೆಳಭಾಗದ ಕಡೆಗೆ ಒಯ್ಯುವದಿಲ್ಲ. ಇನ್ನೊಂದು ಕೈಯನ್ನು ಅಲ್ಲಿಯೇ ಸ್ಥಿರವಾಗಿ ಇಟ್ಟುಬಿಡುತ್ತಾಳೆ. ಹೇಳಿದ ವಿನಃ ಆ ಕೈಯಿಂದ ಯಾವ ಕೆಲಸವನ್ನೂ ಮಾಡುವದಿಲ್ಲ. ಯಾವಾಗ ನಾಯಕನಿಗೆ ಇವಳು ತನ್ನ ಜಘನವನ್ನು ಮುಟ್ಟಬಾರದೆಂದು ಅನ್ನಿಸಿ ಅವಳ ಎರಡೂ ಕೈಗಳನ್ನು ತನ್ನ ತೊಡೆಗಳ ಮಧ್ಯದಲ್ಲಿ ಹಿಡಿದು ಒತ್ತಹತ್ತಿದನೆಂದರೆ ಆಗ ತುಸು ಹೊತ್ತಿನನಂತರ ಜಾಸ್ತಿ ತ್ರಾಸಾಗ ಹತ್ತಿದಮೇಲೆ ಅವನ ಇಚ್ಛೆಯ ವಿರುದ್ಧವಾಗಿ ಏನಾದರೂ ಮಾಡಿದರೆ ಅವನು ಬೇಸರ ಪಟ್ಟುಕೊಂಡಾನೆಂದು ಬಿಟ್ಟು ಬಿಡುತ್ತಾಳೆ.

ಈ ನಾಯಿಕೆಯು ಒಂದು ದಿನ, ಮೇಲಿನಂತೆ ನಾಯಕನ ಚೇಷ್ಟೆಗಳನ್ನು ಸಹಿಸಿಕೊಂಡು (ಗ್ರಹಣಮಾಡಿಕೊಂಡು)ಎರಡನೆಯ ದಿನ ಅವನ ಕಾಲುಗಳನ್ನೊತ್ತಲು ಬರುತ್ತಾಳೆ. ಏಕೆಂದರೆ ಅವಳ ಕೆಲಸವಿನ್ನೂ ಪೂರ್ತಿಯಾಗಿರುವದಿಲ್ಲ.

ಯಾವಾಗಾದರೊಮ್ಮೆ ಅತ್ಯಂತ ಧೀರಳಿದ್ದರೆ ಮಾತ್ರ ಅದರ ಕಾರಣವಾಗಿ ತನ್ನ ಭಾವಗಳನ್ನು ಮುಚ್ಚಿಯೂ ಪ್ರವೃತ್ತಿಯನ್ನು ತೋರಿಸುತ್ತಾಳೆ. ತಾನು-ತಾನಾಗಿಯೇ ವಿಶೇಷವಾಗಿ ಸಂಪರ್ಕವನ್ನು ಬೆಳೆಸುವದಿಲ್ಲ. ಆದರೆ ಆ ನಾಯಕನನ್ನು ಮಾತ್ರ ಒಮ್ಮೆಲೇ ಬಿಡುವದಿಲ್ಲ.

ಬೇರೆಯವರಿಗೆ ತಿಳಿಯಲಿಕ್ಕಿಲ್ಲವೆಂದು ನಿಶ್ಚಯವಾದಮೇಲೆ ಏಕಾಂತದಲ್ಲಿ ಭಾವವನ್ನು ಪ್ರಕಟಮಾಡುತ್ತಾಳೆ. ಏಕಾಂತ ಸಮಯವು ಸಿಗದೆ ಇದ್ದರೆ ಅನ್ಯಸ್ಥಳದಲ್ಲಿ, ಜನಸಮುದಾಯವಿದ್ದರೂ ಕೂಡ ಮುಚ್ಚುಮರೆಯಾಗಿ ಗೂಢತನದಿಂದ ಭಾವಗಳನ್ನು ಪ್ರಕಟಮಾಡುತ್ತಾಳೆ.

ಯಾವಳು ಜತೆಗೂಡಿ, ಸೇವೆಮಾಡಿ, ಭೋಗಿಸಲ್ಪಟ್ಟು, ಇಂಗಿತಾಕಾರಗಳನ್ನು ತೋರಿಸಿಯೂ ಮೊದಲಿನಂತೆಯೇ ಆದರೆ, ಅವಳನ್ನು ಕುಶಲಳಾದ ದೂತಿಯ ಸಹಾಯದಿಂದ ಸಿದ್ಧಮಾಡಿಕೊಳ್ಳಬೇಕು.

ಯಾವಳು ಸಂಜ್ಞಾ-ಸೂಚನೆಗಳನ್ನು ಮಾಡುತ್ತಲೇ ದೂರವಾಗುತ್ತಾಳೋ ಅವಳ ವಿಷಯಕ್ಕೆ ವಿಶೇಷ ವಿಚಾರಮಾಡಬೇಕು. ಏಕೆಂದರೆ ಆದರಿಂದ ಅವಳು ಅಂಜಿಕೆಯಿಂದ ಹೀಗೆ ಮಾಡುತ್ತಾಳೋ ಅಥವಾ ಕೇವಲ ಒಣ ಉತ್ಸುಕತೆಯಿಂದಲೋ ಎಂಬುದು ತಿಳಿಯುತ್ತದೆ.

ಇದರಂತೆ ಶ್ರೀ ವಾತ್ಸ್ಯಾಯನ ಮುನಿಕೃತ ಕಾಮಸೂತ್ರದಲ್ಲಿನ ಪರದಾರಿಕವೆಂಬ ಐದನೇ ಅಧಿಕರಣದಲ್ಲಿ ಭಾವಪರೀಕ್ಷೆಯೆಂಬ ಮೂರನೇ ಅಧ್ಯಾಯ, ಸಮಾಪ್ತ.

---

### ಅಧ್ಯಾಯ : ೪

## ದೂತಿಯರ ಕೃತಿಗಳ ಪ್ರಕರಣ

ಇದೇ ಅಧಿಕರಣದ ಎರಡನೆಯ ಅಧ್ಯಾಯದ ಎರಡನೇ ಸೂತ್ರದಲ್ಲಿ ತನ್ನಿಂದ ಸಾಧ್ಯವಾಗದಿದ್ದರೆ ದೂತಿಯರನ್ನು ಯೋಜಿಸಬೇಕೆಂದು ಹೇಳಲಾಗಿದೆ, ಆ ದೂತಿಯರ ಕೆಲಸವನ್ನೇ ಇಲ್ಲಿ ವಿಸ್ತರಿಸಿ ಹೇಳಲಾಗುವುದು.

ಯಾವಳು ಸಂಜ್ಞೆಗಳನ್ನು ಮಾಡಿಯೂ, ಭಾವಗಳನ್ನೂ ತೋರಿಸಿಯೂ ಕೂಡ ವಶಳಾಗುವದಿಲ್ಲವೋ ಅಥವಾ ಯಾವಳಾದರೂ ಅಪೂರ್ವ ಸ್ತ್ರೀಯಳಿದ್ದರೆ ಅಂಥವಳನ್ನು ದೂತಿಯರಿಂದ ಸಾಧ್ಯಮಾಡಿಕೊಳ್ಳಬೇಕು.

ದೂತಿಯರಲ್ಲಿ ಎಂಟು ಪ್ರಕಾರದವರಿದ್ದಾರೆ. ಆದರೆ ಅವರೆಲ್ಲರದೂ ಇಲ್ಲಿ ಆವಶ್ಯಕತೆಯಿರದ್ದರಿಂದ ಅವಶ್ಯಕರಾದ ಮೂವರನ್ನೇ ಇಲ್ಲಿ ಹೇಳು

ತ್ತಾರೆ. ಅವರು ಯಾರೆಂದರೆ ೧) ನಿಸೃಷ್ಟಾರ್ಥಾ, ೨) ಪರಿಮಿತಾರ್ಥಾ ಮತ್ತು ೩) ಸಂದೇಶಹಾರಿ ಎಂದು. ಈ ಮೂರೂ ತರಹದ ದೂತಿಯರ ಕಾರ್ಯವನ್ನು ಸಾಮಾನ್ಯ ಭಾಷೆಯಲ್ಲಿ ಹೇಳಬೇಕೆಂದರೆ:—

೧) ದೂತಿಯು ಸರಳಸ್ವಭಾವವನ್ನು ತೋರಿಸಿ ಅವಳು ಮುಂದೆ ಹೋಗುತ್ತಾಳೆ. ನಂತರ ಕಪಟತುಂಬಿದ ಮಾತುಗಳಿಂದ, ಸುಂದರ ಮುಂತಾದ ಯೋಗಗಳಿಂದ, ಜಗತ್ತಿನ ಸುದ್ದಿಗಳಿಂದ, ಕವಿಗಳ ವಿಷಯದ ಚರ್ಚೆಗಳಿಂದ, ಪರಸ್ತ್ರೀ ಇಲ್ಲವೆ ಪರಪುರುಷರ ಉಚ್ಛೃಂಖಲ ಕಥೆಗಳಿಂದ ಅಂದರೆ ಒಟ್ಟಿನ ಮೇಲೆ ಅವಳ ಸೌಂದರ್ಯ, ವಿಜ್ಞಾನ, ಚತುರತೆ ಮತ್ತು ಶೀಲಾದಿಗಳ ಪ್ರಶಂಸೆಯನ್ನು ಮಾಡಿ ಅವಳನ್ನು ತನ್ನ ಮೈತ್ರಿಣಿಯನ್ನಾಗಿ ಮಾಡಿಕೊಳ್ಳುತ್ತಾಳೆ. ಆಮೇಲೆ, ಇಷ್ಟು ಒಳ್ಳೇಯವಳಾದ ನಿನಗೆ ಇಂಥ ಕುರೂಪಿ (ಪುರುಷ ಸಹಜವಾದ ಯಾವದೇ ದೋಷವನ್ನು ಎದ್ದೆಣಿಸುವದು) ಯಾವ ಪತಿ ಹೇಗೆ ಸಿಕ್ಕ? ಎಂದು ಮುಂತಾಗಿ ಅವಳ ಪತಿಯನ್ನು ತಿರಸ್ಕರಿಸಹತ್ತಿದರೆ, ನಾಯಿಕೆಯ ಮನಸ್ಸಿನಲ್ಲಿ ಪಶ್ಚಾತ್ತಾಪವೂ ಮತ್ತು ಸ್ವಪತಿಯ ವಿಷಯಕ್ಕೆ ದ್ವೇಷವೂ ಹುಟ್ಟುತ್ತದೆ. ಪುರುಷರ ವಿಷಯಕ್ಕೆ ಸ್ತ್ರೀಯರಲ್ಲಿ ತಿರಸ್ಕಾರ ಹುಟ್ಟಬೇಕಾದರೆ ವಿಷಮತೆಗೇ ಪ್ರಾಧಾನ್ಯತೆಯಿರುವದನ್ನು ಇವಳು ಅರಿತಿರುವದರಿಂದ ನಾಯಿಕೆಯ ಪತಿಯು ಶಶ, ವೃಷಭ ಇಲ್ಲವೆ ಅಶ್ವಜಾತಿಯವನಿದ್ದು ನಾಯಿಕೆಯು ಅದಕ್ಕೆ ವಿರುದ್ಧವಾಗಿ ಹಸ್ತಿನಿ ಮೃಗಿ ಇಲ್ಲವೆ ಕಡಿಬಿ ಇದ್ದದ್ದಾದರೆ ಆ ವಿಷಮತೆಯನ್ನು ಅವಳ ಪತಿಯ ದೋಷವೆಂದು ಕರೆಯಲೂ ಅವರಂತೆ ನಾಯಿಕೆಯ ಮನಸ್ಸಿನಲ್ಲಿ ಬಿಂಬಿಸಲೂ ಈ ದೂತಿಯು ಹಿಂಜರಿಯುವದಿಲ್ಲ. ಇದರಂತೆ ನಾಯಿಕೆಯ ಮನಸ್ಸು ಕಲುಷಿತವಾಯಿತೆಂದರೆ ಅವಳು ಸ್ವಪತಿಯನ್ನು ಇಮ್ಮಡಿಯಾಗಿ ದ್ವೇಷಿಸಹತ್ತುತ್ತಾಳೆ.

ಇಂಥ ಪ್ರಸಂಗದಲ್ಲಿ ಅವಳ ಪತಿಯನ್ನು ದ್ವೇಷಿಸುತ್ತಿದ್ದಂತೆಯೇ ನಾಯಕನ ದೊಡ್ಡಿಸ್ತನ, ಅವನ ಉತ್ತಮ ಚಾರಿತ್ರ್ಯ, ವಿಷಯೋಪಭೋಗಗಳಲ್ಲಿ ಅವನಿಗಿದ್ದ ಆಸಕ್ತಿ ಇವೆಲ್ಲವನ್ನೂ ಹೇಳುತ್ತಾಳೆ. ಇದರಂತೆ ಮೇಲಿಂದ ಮೇಲೆ ವರ್ಣಿಸುತ್ತ ಹೋದರೆ ನಾಯಿಕೆಯ ಮನಸ್ಸಿನಲ್ಲಿ ಆಸಕ್ತಿ ತಾನೇ ತಾನಾಗಿ ಹುಟ್ಟುತ್ತದೆ.

**ಎರಡನೇ ಸಲದ ಕಾರ್ಯ:** ಮೇಲಿನ ಸೂತ್ರದಲ್ಲಿ ಹೇಳಿದ ಮಾತುಗಳನ್ನು ಹೇಳಿದರೂ ಕೂಡ ನಾಯಿಕೆಯ ಮನಸ್ಸಿನಲ್ಲಿ ಯಾವದೇ ಪರಿಣಾಮವಾಗದಿದ್ದರೆ,ಆ ದಿನ ಮಾತು ಕತೆಗಳನ್ನು ಅಲ್ಲಿಗೇ ಬಿಟ್ಟು ಎರಡನೇ ದಿನ ಅವಳು ಬರುತ್ತಲೇ ಪ್ರೇಮ ಪುರಸ್ಕರದಿಂದ ಮಾತನಾಡಿಸಿ, ಮುಖವನ್ನು ಪ್ರಸನ್ನವಾಗಿಟ್ಟುಕೊಂಡು ಹಿಂದಿನ ದಿನದ ಮಾತಕತೆಗಳ ಸಂಬಂಧವೇ ಇಲ್ಲದಂತೆ ವರ್ತಿಸಿ, ನಂತರ ಕೌಟುಂಬಿಕ ವಿಷಯದ ಬಗ್ಗೆ ಮಾತುಗಳನ್ನು ಸುರುಮಾಡುತ್ತಾಳೆ. ಯಾವಾಗ ಇಂಥ ಮಾತುಗಳನ್ನು ನಾಯಿಕೆಯು ಕೇಳಹತ್ತಿದಳೆಂದರೆ ಆಗ ಅಹಲ್ಯೆ, ಅವಿಮಾರಕ ಹಾಗೂ ಶಕುಂತಲೆ ಮುಂತಾದವರ, ಅದರಂತೆ ಅನ್ಯ ಪರ ಸ್ತ್ರೀ-ಪುರುಷರ ಲೌಕಿಕ ಮಾತುಕತೆಗಳನ್ನು ಹೇಳುತ್ತಾಳೆ. (ಇಂದ್ರನನ್ನು ಬಯಸಿದ ಗೌತುಮನ ಪತ್ನಿ ಅಹಲ್ಯೆಯ ಕಥೆ ಎಲ್ಲರಿಗೂ ಗೊತ್ತಿದೆ. ಅದರಂತೆ ಅಗ್ನಿಹೋತ್ರಕನೆಂಬ ಅಗ್ನಿಯ ಉಪಾಸಕನು ತನ್ನ ಸೊಸೆಯನ್ನು ಅಗ್ನಿದೇವನ ಪರಿಚಾರಿಕೆಯನ್ನಾಗಿಸಲು ಬಯಸಿದ್ದ, ಅವಳನ್ನು ಹೋಮಕುಂಡದಿಂದ ಎದ್ದು ಬಂದ ಅಗ್ನಿದೇವನು ಇಚ್ಛಿಸಿದ್ದನು. ಯಾವಾಗ ಅವಳಿಗೆ ಗರ್ಭದಾರಣೆಯಾಯಿತೋ ಆಗ ಅವಳ ಮಾವನು ಕುಲದೋಷದ ಕಾರಣವಾಗಿ ಅವಳನ್ನು ಕಾಡಿನಲ್ಲಿ ಬಿಟ್ಟು ಬಂದನು. ಕಾಲಾಂತರದಿಂದ ಅವಳಿಗೊಬ್ಬ ಮಗನು ಹುಟ್ಟಿ ಅವಳ ಜತೆಗೆನೇ ಅರಣ್ಯದಲ್ಲಿ ಬೆಳೆದನು. ಆ ಹುಡುಗನನ್ನು ಮಿಲ ಎಂಬ ಸೇನಾಪತಿಯು ತನ್ನ ಮಗನಂತೆ ದೊಡ್ಡವನನ್ನಾಗಿ ಮಾಡಿದನು. ಆ ಹುಡುಗನು ಚಿಕ್ಕತನದಿಂದಲೇ ಆಡು ಕುರಿ ಹಿಂಡುಗಳ ಜತೆಗೆ ಆಡಿ ಅವುಗಳ ಹಾಲನ್ನು ಕುಡಿಯುತ್ತಿದ್ದುದರಿಂದ ಅತ್ಯಂತ ಬಲವಂತನಾದನು. ಹೀಗೆ ಬಲವಂತನಾದ ಅವನು ಆ ಆಡು ಕುರಿಗಳನ್ನು ಒಂದೇ ಏಟಿಗೆ ಹೊಡೆದು ಕೊಲ್ಲುವಷ್ಟು ಶಕ್ತಿವಂತನಾದದ್ದನ್ನು ನೋಡಿ ಆ ಸೇನಾಪತಿಯು ಅವನಿಗೆ ಅನುಗುಣವಾದ ಅವಿಮಾರಕನೆಂಬ ಹೆಸರನ್ನಿಟ್ಟನು. ಮುಂದೆ ಈ ಅವಿಮಾರನು ಅರಣ್ಯದಲ್ಲಿ ಒಬ್ಬೊಂಟಿಗನಾಗಿ ಆನೆಯೊಂದರ ಕೈಯಿಂದ ಕೊಲ್ಲಲ್ಪಡುತ್ತಿದ್ದ ಓರ್ವ ರಾಜಕುಮಾರಿಯ ಜೀವವನ್ನು ಆ ಆನೆಯನ್ನು ಕೊಂದು ಉಳಿಸಿದನು. ಇವನ್ನು ನೋಡಿ ಆ ರಾಜಕನ್ಯೆಗೆ ಇವನ ವಿಷಯಕ್ಕೆ ಅನುರಾಗ ಹುಟ್ಟಿ, ಅವನ ಪಾಣಿಗ್ರಹಣ ಮಾಡಿದಳೆಂಬ ಕಥೆಯು ಅಗ್ನಿಪುರಾಣ ಓದಿದವರಿಗೆ ಅರಿಯದ ವಿಷಯ

ವಲ್ಲ. ಒಟ್ಟಿನಮೇಲೆ ಇದಾಗಲೀ ಇಂಥ ಬೇರೆತರಹದ ಸ್ತ್ರೀ-ಪುರುಷರ ಪ್ರೇಮಾಖ್ಯಾನಗಳನ್ನಾಗಲಿ ಹೇಳಿ ನಾಯಿಕೆಯಲ್ಲಿ ಅನುರಾಗವನ್ನು ಹಟ್ಟಿಸಲು ನೋಡುತ್ತಾಳೆಂದು ಹೀಗೆ ಹೇಳುವದರ ತಾತ್ಪರ್ಯ. **ಅನು.**)

ನಂತರ ನಾಯಕನಲ್ಲಿದ್ದ ಸಮಾಗಮ ಶಕ್ತಿ, ವಾದ್ಯವಾದನ ಪಟುತ್ವ ಮತ್ತು ಅರವತ್ತುನಾಲ್ಕು ಕಲೆಗಳಲ್ಲಿ ಅವನಿಗಿದ್ದ ಪ್ರಾವೀಣ್ಯತೆ ಇವುಗಳನ್ನು ಹೇಳುತ್ತಾಳೆ. ಅನ್ಯ ಪುರುಷರು ಈರ್ಷೆಸುವಂತಹ ಭಾಗ್ಯವಂತನು ಅವನೆಂದು ಹೇಳುತ್ತಾಳೆ. ಅವನಿಗೆ ಎಂತೆಂತಹ ಸ್ತ್ರೀಯರು ಬಯಸುತ್ತಾರೆಂಬುದನ್ನೂ ಹೇಳುತ್ತಾಳೆ. ಇವಳ ಮಾತುಗಳು ಜಗಜ್ಜಾಹೀರವಾಗುವದಿಲ್ಲೆಂಬುದನ್ನು ಇವಳು ಅರಿತಿರುವದರಿಂದ ಅಸತ್ಯ ಸಂಗತಿಗಳನ್ನೂ ಸತ್ಯವೆಂದು ವರ್ಣಿಸಿ ಹೇಳುತ್ತಾಳೆ.

**ಈ ಮಾತುಗಳಲ್ಲಿ ಆಕಾರದ ಪರೀಕ್ಷೆ:** ನಾಯಕನ ವಿಷಯದ ಮಾತುಗಳು ನಾಯಿಕೆಗೆ ಸೇರುತ್ತವೆಯೋ ಇಲ್ಲವೋ ಎಂಬುದನ್ನು ದೂತಿಯು ನಾಯಿಕೆಯ ಭಾವ ಭಂಗಿಗಳಿಂದ ತಿಳಿದುಕೊಳ್ಳುತ್ತಾಳೆ. ಅವು ಯಾವವೆಂದರೆ:--

ಮುಖನೋಡಿ ನಗುತ್ತ ಮಾತನಾಡುತ್ತಾಳೆ. ಸನ್ಮಾನ ಪೂರ್ವಕವಾಗಿ ಆಸನದಮೇಲೆ ಕುಳಿತುಕೊಳ್ಳಲು ಹೇಳುತ್ತಾಳೆ. ಎಲ್ಲಿ ಕೂತಿದ್ದಿ, ಎಲ್ಲಿ ಮಲಗಿದ್ದಿ,-ಏನು ಮಾಡಿದೆ? ಇವುಗಳನ್ನು ಕೇಳುತ್ತಾಳೆ. ಇದರಂತೆ ಕೇಳಲು ಕಾರಣವೇನೆಂದರೆ, ನಾಯಕನ ವಿಷಯಕ್ಕೇನಾದರೂ ಸುದ್ದಿ ಹೊರಡುತ್ತದೆಯೋ ಎಂಬುದನ್ನು ನೋಡುವದಕ್ಕಾಗಿ. ರಹಸ್ಯಗಳನ್ನೇನಾದರೂ ಹೇಳಬಹುದೆಂಬುವ ಆಶೆಯಿಂದ ಏಕಾಂತದಲ್ಲಿಯೇ ಭೆಟ್ಟಿಯಾಗುತ್ತಾಳೆ. ಅಧೀರತೆಯನ್ನು ಹೋಗಲಾಡಿಸುವದಕ್ಕಾಗಿ ಮಾತು ಸುರು ಮಾಡುತ್ತಾಳೆ. ಇಲ್ಲವೆ ನಾಯಕನ ವಿಷಯಕ್ಕೆ ಚರ್ಚೆ ಹೊರಡುವಂತೆ ಸಂಗತಿಗಳನ್ನು ಕೇಳುತ್ತಾಳೆ. ವಿಚಾರಮಗ್ನಳಾಗಿ ಬೆಚ್ಚಗಿನ ಉಸಿರು ಬಿಟ್ಟು ಆಕಳಿಸುತ್ತಾಳೆ. (ಆಕಳಿಸುವದೆಂದರೆ ಸಾತ್ವಿಕತೆಯನ್ನು ಪ್ರಕಟ ಮಾಡಿದಂತೆ. ಆಕಳಿಸುವದು ಕಾಮಲಾಲಸೆಯಿಂದಲೂ ಆಗುತ್ತದೆ. **ಅನು.**) ಪ್ರೇಮ ಪುರಸ್ಕರವಾಗಿ ಕೊಡಲ್ಪಡುವ ವಡವೆಗಳನ್ನು ಕೊಡುತ್ತಾಳೆ. ಇಷ್ಟ ಕಾರ್ಯಗಳಲ್ಲಿ ಅದರಂತೆ ಉತ್ಸವ ಪ್ರಸಂಗಗಳಲ್ಲಿ ಅವನೇಕೆ ಕಾಣಿಸಿ

ಕೊಳ್ಳಲಿಲ್ಲವೆಂದು ಅವನನ್ನು ನೆನೆಸುತ್ತಾಳೆ. ನೀನು ತಿರುಗಿಯೂ ಇನ್ನೊಮ್ಮೆ ಬರಬೇಕು ಎಂದು ಹೇಳಿ ದೂತಿಯನ್ನು ಕಳುಹಿಸಿಕೊಡುತ್ತಾಳೆ.

ಯಾವಾಗ ದೂತಿಯು, ನಿನ್ನನ್ನು ನೋಡುತ್ತಲೇ ಇಲ್ಲವೆ ನಿನ್ನ ಹೆಸರನ್ನು ಕೇಳುತ್ತಲೇ ನಾಯಕನಿಗೆ ಎಷ್ಟೊಂದು ಆನಂದವಾಗುತ್ತದೆ. ಮಾತುಕತೆಗಳೆ ಮಾತಂತೂ ಒತ್ತಟ್ಟಿಗಿರಲಿ ಎಂದು ಹೇಳುತ್ತಾಳೋ ಆಗ ತಾನು ಸಾಧ್ವಿ ಮುಂತಾಗಿ ಹೇಳಿ ಅವರಿಬ್ಬರಲ್ಲಿ ಮಾತುಕತೆಗಳನ್ನು ಶುರು ಮಾಡುತ್ತಾಳೆ. ನಾಯಕನ ಧೂರ್ತತೆ ಹಾಗೂ ವಿಷಯೋಪಭೋಗಗಳಲ್ಲಿ ಅವನಿಗಿದ್ದ ಚಂಚಲತೆ ಇಷ್ಟಗಳನ್ನು ಸ್ಫುಟವಾಗಿ ವರ್ಣಿಸಿ ಹೇಳುತ್ತಾಳೆ. ಅವಳನ್ನು ನಾಯಕನು ಯಾವ ಯಾವ ಸ್ಥಳಗಳಲ್ಲಿ ಇಲ್ಲವೆ ಅವಳು ನಾಯಕನನ್ನು ಯಾವ ಯಾವ ಸ್ಥಳಗಳಲ್ಲಿ ನೋಡುವಳು ಎಂಬ ಎಲ್ಲ ಮಾತುಗಳನ್ನು ಅಂದರೆ ಮೇಲಿಂದ ಮೇಲೆ ಆ ವಿಷಯವನ್ನು ಚರ್ಚಿಸುವವರಿಂದ ನಾಚಿಕೆಯಿಂದ ಆ ವಿಷಯಕ್ಕೆ ನಾಯಿಕೆಯು ಸ್ವಯಂ ತಾನೇ ಆಗಿ ಮಾತುಗಳನ್ನು ತೆಗೆಯದಿದ್ದರೂ ಕೂಡ, ದೂತಿಯು ಅದನ್ನು ತನಗೆ ತಿಳಿಸಬೇಕೆಂದು ಮನಸಾ ಇಚ್ಛಿಸುತ್ತಾಳೆ. ಈ ಮಾತುಗಳಿಂದ ಕೂಡ ಅವಳಿಗೆ ಸುಖ ಸಿಕ್ಕುತ್ತದೆ. ನಾಯಕನ ಮನೋರಥವು ಏನಿದೆಯೆಂಬುದನ್ನು ತಿಳಿದನಂತರ ತಿರಸ್ಕಾರವನ್ನು ತೋರಿಸಿಯೂ ಕೂಡ ನಗುತ್ತಾಳೆ. ಆದರೆ, ಅವನ ಮನೋರಥವು ಈಡೇರುತ್ತದೆಯೋ ಅಥವಾ ಇಲ್ಲವೋ ಎಂಬುದನ್ನು ಮಾತ್ರ ಹೇಳುವದಿಲ್ಲ.

**ಆಕಾರಗಳನ್ನು ತಿಳಿದುಕೊಳ್ಳುವದರ ಉಪಯೋಗ:** ನಾಯಿಕೆಯ ಒಲವನ್ನು ಆಕಾರಗಳಿಂದ ತಿಳಿದುಕೊಳ್ಳಬೇಕೆಂದು ಹೇಳುತ್ತಿರುವದಕ್ಕೆ ಏನು ಫಲ? ಎಂಬುದಕ್ಕೆ ಮುಂದಿನಂತೆ ಉತ್ತರ ಕೊಡುತ್ತಾರೆ.–

ಹಿಂದೆ ಹೇಳಿದಂತೆ ನಾಯಿಕೆಯ ಆಕಾರವನ್ನು ತಿಳಿದುಕೊಂಡ ನಂತರ ನಾಯಕನ ಹಳೆಯ ಪ್ರೇಮಾಲಾಪಗಳನ್ನು ಹೇಳಿ, ಅವಳನ್ನು ಅನುರಕ್ತಳನ್ನಾಗಿ ಮಾಡಬೇಕು. ಪರಿಚಯವಿಲ್ಲದವಳಿದ್ದರೂ ಕೂಡ ಪ್ರೇಮಾಖ್ಯಾನ ಇಲ್ಲವೆ ಅವನ ಗುಣಗಳನ್ನು ಹೇಳಿ-ಹೇಳಿ ಅವನ ಕಡೆಗೆ ಎಳೆದುಕೊಳ್ಳುತ್ತಾಳೆ.

**ದೂತಿ ಕಾರ್ಯದ ವಿಷಯಕ್ಕೆ ಆಚಾರ್ಯರಲ್ಲಿ ಮತಭೇದ:** ದೂತಿ ಕಾರ್ಯದ ವಿಷಯಕ್ಕೆ ಪೂರ್ವಾಚಾರ್ಯರ ಮತಭೇದಗಳನ್ನು ಮುಂದೆ ಹೇಳಿದಂತೆ ಹೇಳುತ್ತಾರೆ:—

೧) ಯಾವಳು ಅಪರಿಚಿತಳಿದ್ದಾಳೋ ಮತ್ತು ಯಾವಳ ಭಾವ ಸೂಚಕವಾದ ಆಕಾರಗಳ ಅರ್ಥವಾಗುವದಿಲ್ಲವೋ ಅವಳಲ್ಲಿ ದೂತಿಕಾರ್ಯ ಸಾಧನೆಯಾಗುವದಿಲ್ಲೆಂದು ಶ್ವೇತಕೇತುವಿನ ಮತ. ೨) ಪರಿಚಯ ವಿರದಿದ್ದರೂ ಆಕಾರಗಳನ್ನು ತೋರಿಸುವವರಲ್ಲಿ ದೂತಿಕಾರ್ಯ ಸಾಧನೆಯಿದೆ ಎಂದು ಬಾಭ್ರವ್ಯನ ಮತ. ೩) ಅಪರಿಚಿತ ಇಲ್ಲವೆ ಆಕಾರ ಪ್ರದರ್ಶನ ಗಳನ್ನು ಮಾಡದಿರುವವಳಲ್ಲಿಯೂ ಕೂಡ ದೂತಿಕಾರ್ಯ ಸಾಧನೆಯಾಗು ತ್ತದೆ (ಅಂದರೆ ಯಾರೂ ಅಸಾಧ್ಯರಲ್ಲ) ಎಂದು ಗಣಿಕಪುತ್ರನ ಮತ. ೪) ಇವುಗಳ ವಿಷಯಕ್ಕೆ ವಾತ್ಸ್ಯಾಯನನ ಮತವೇನೆಂದರೆ, ಪರಿಚಯವಿರ ದಿದ್ದರೂ ಕೂಡ ಪರಸ್ಪರರ ಸೂಕ್ಷ್ಮ-ಸೂಚನೆಗಳನ್ನು ತಿಳಿದುಕೊಳ್ಳುವವ ರಲ್ಲಿ ದೂತಿಕಾರ್ಯ ಸಾಧ್ಯವಾಗುತ್ತದೆ.

**ವಸ್ತುಗಳನ್ನು ಕಳಿಸುವದು:** ಅಪರಿಚಿತರಿಗೆ ಮನೋಹರವಾದ ಕಾಣಿಕೆ, ಎಲೆ, ಕೇಸರಿ, ದೂಮಾಲೆ, ಉಂಗುರ ಮತ್ತು ಕಳಿಸಿಕೊಟ್ಟ ವಸ್ತ್ರಗಳನ್ನು ತೋರಿಸಬೇಕು. ಅವುಗಳ ಮೇಲೆ ವಸ್ತುಗಳಿಗೆ ತಕ್ಕಂತೆ ನಾಯಕನ ಉಗುರು ಇಲ್ಲವೆ ಹಲ್ಲುಗಳ ಗುರುತುಗಳಿರುತ್ತವೆ. ಕಳಿಸಿ ಕೊಡಲ್ಪಡುವ ವಸ್ತುಗಳ ಮೇಲೆ ಸಂಪ್ರಯೋಗ ಸೂಚಕವಾದ ಚಿಹ್ನೆ ಗಳಿರಬೇಕು. ವಸ್ತ್ರಗಳ ಮೇಲೆ ಕೇಸರಿಯ ಮುದ್ದೆಗಳನ್ನಿಡಬೇಕು. (ಕೇಸರಿ ಬಣ್ಣವನ್ನು ಮಾಡಿ ಅದನ್ನು ಅಂಗೈಗೆ ಹಚ್ಚಿಕೊಂಡು, ಬಟ್ಟೆಯ ಮೇಲೆ ಕೈಯ ಅಚ್ಚೊತ್ತುವದು)' ಅನೇಕ ತರದ ಅಭಿಪ್ರಾಯಗಳುಳ್ಳ ಆಕೃತಿಯ ಪತ್ರಚ್ಛೇದ ಮಾಡಬೇಕು. ಕಿವಿಯಲ್ಲಿ ಹಾಕಿಕೊಳ್ಳುವ ಹೂವಿನ ಗೊಂಚಲವಲ್ಲಾಗಲೀ ಅಥವಾ ಮುಡಿಯ ಹಾರವಲ್ಲಾಗಲೀ ಪತ್ರ ಹಾಕಿ ಕಳಿಸಬೇಕು. ಆ ಪತ್ರಗಳಲ್ಲಿ ತನ್ನ ಮನೋಗತವನ್ನು ಹೇಳಿರಬೇಕು.

ಇದರಂತೆ ಒಬ್ಬರಿನ್ನೊಬ್ಬರ ಹೃದಯಗಳಲ್ಲಿ ಆಕಾಂಕ್ಷೆ ಹುಟ್ಟಿಸಿದ ನಂತರ ದೂತಿಗೆ ವಿಶ್ವಾಸ ಹುಟ್ಟುವಂಥ ಸಮಾಗಮವಾಗುತ್ತದೆ. ಏಕೆಂದರೆ ಈ ಹೊತ್ತಿನಲ್ಲಿ ಅವಳ ನಿರ್ದೇಶನದಂತೆಯೇ ಎಲ್ಲ ಕಾರ್ಯಗಳಾಗುತ್ತಿರು

ತ್ತವೆ. ಈ ಸಮಾಗಮಸ್ಥಳಗಳಾವುವೆಂದರೆ:- ಸ್ವಜಾತಿಯರು ಕೂಡಿಕೊಂಡು ದೇವ ಪೂಜೆಗೆ ಹೋಗುವಾಗ, ಜಾತ್ರೆಗಳಲ್ಲಿ, ವನವಿಹಾರದಲ್ಲಿ, ಜಲ ಕ್ರೀಡನಗಳಲ್ಲಿ, ವಿವಾಹಗಳಲ್ಲಿ, ಯಜ್ಞಗಳಲ್ಲಿ, ವ್ಯಸನ, ಉತ್ಸವಗಳಲ್ಲಿ, ಅಗ್ನಿಪ್ರಕೋಪದ ಕಾಲದಲ್ಲಿ (ಬೆಂಕಿಹತ್ತಿದಾಗ), ಕಳ್ಳರ ಹಲ್ಲೆಗಳಲ್ಲಿ, ರಾಜಪರಿವರ್ತನ ಪ್ರಸಂಗಗಳಲ್ಲಿ, ಆಟ-ತಮಾಷೆ ಮುಂತಾದವುಗಳಲ್ಲಿ ಎಂದು ಬಾಭ್ರವ್ಯನ ಸಿದ್ಧಾಂತ.

ದೂತಿಯ ಮನೆಯಲ್ಲಿ, ಸ್ವೈರಿಣಿಯರ ಮನೆಗಳಲ್ಲಿ, ಭಿಕ್ಷುಕಿ, ಸನ್ಯಾಸಿನಿ ಮತ್ತು ತಪಸ್ವಿನಿ ಇವರ ಮನೆಗಳಲ್ಲಿ ಕಲೆತು ಕೂಡುವುದು ಸುಖ ದಿಂದ ಆಗುವುದಿರುತ್ತದೆಯೆಂದು ಗಣಿಕಪುತ್ರನ ಮತ. ಇಂಥವರ ಮನೆ ಗಳಲ್ಲಿ ಯಾವಾಗಬೇಕೆಂದರೆ ಆಗ ಸಮಾಗಮಗಳಾಗುತ್ತವೆ.

**ದೂತಿಯರ ಮೇಲೆ ಒಂದು ದೃಷ್ಟಿ:** (ಈ ವಿಮರ್ಶೆ ವಾತ್ಸ್ಯಾಯನನ ಕಾಮಸೂತ್ರದ ಟೀಕೆಯನ್ನು ಇತ್ತೀಚಗೆ ಬರೆದ ಜಯಮಂಗಲನದು. ನಮ್ಮ ಅನುವಾದದಲ್ಲಿ ಜಯಮಂಗಲನ ಟೀಕೆಯೂ ಸಮಾವೇಶವಾಗಿದೆ ಎಂದು ಮೊದಲ ಭಾಗದ ಪ್ರಸ್ತಾವನೆಯಲ್ಲಿ ಹೇಳಿದ್ದೇವೆ. ಅದಕ್ಕಾಗಿ ಟೀಕೆಯನ್ನೂ ಮೂಲ ವಿಷಯವನ್ನೂ ಅನುವಾದಿಸಿದರೆ ಉದ್ದ ಗ್ರಂಥ ವಾಗುತ್ತದೆಯೆಂದು ಮೂಲ ವಿಷಯವನ್ನಷ್ಟೇ ಇಲ್ಲಿಯ ತನಕ ಅನುವಾದಿ ಸುತ್ತ ಬಂದಿದ್ದೇವೆ. ಆದರೆ ಕನ್ನಡದಲ್ಲಿ ಕೋಕನ ಕೃತಿಯು ಮೂಲ ಕಾಮಸೂತ್ರವೆಂದು ಅನುವಾದಿತವಾಗುತ್ತಿರುವುದರಿಂದ, ಜಯಮಂಗಲ ನಂಥ ಅರ್ವಾಚೀನ ಟೀಕಾಕಾರನೂ ತನ್ನ ಟೀಕಾ ಗ್ರಂಥದಲ್ಲಿ ಅವನ್ನು ಉದ್ಧರಿಸಿದ್ದಾನೆಂಬುದನ್ನು ತೋರಿಸುವುದಕ್ಕಾಗಿಯೇ "ದೂತಿಯರ ಮೇಲಿನ ಈ ದೃಷ್ಟಿಯನ್ನು" ಇಲ್ಲಿ ಕೊಡಲಾಗಿದೆ. **ಅನು.**)

ಹಾಲು ಮೊಸರಿನವಳು, ಸ್ಥಿರಭಾವವುಳ್ಳವಳೂ ಮತ್ತು ಕಪ್ಪಗಿದ್ದ ವಳೂ, ಚತುರ ಪುರುಷರಲ್ಲಿನ ಶುಕ-ಸಾರಿಕೆ ಮುಂತಾದ ಪ್ರತಿಮೆ ಇವು ದೂತಿಯರಾಗುತ್ತಾರೆ. ಅಲ್ಲದೆ, ಹೂವಾಡಿಗರಲ್ಲಿನ ಕನ್ಯಕೆ, ಗೆಳತಿ, ವಿಧವೆ, ದಾಸಿಯಪುತ್ರಿ, ನಟಿ, ಶಿಂಪಿಗರ ಕೆಲಸಮಾಡುವವಳು, ಸ್ವೈರಂಧ್ರಿ ಅನ್ಯರ ಆಶ್ರಯದಲ್ಲಿರುವವಳು, ಅಗಸರವಳು, ದಾಸಿ, ಸಂಬಂಧಿಕಳು, ಮುಗ್ಧಳಾದ ಬಾಲಿಕೆ, ಭಿಕ್ಷುಕಿ ಮತ್ತು ಪುರುಷನಿಂದ ತಿರಸ್ಕರಿಸಲ್ಪಟ್ಟ

ಸ್ತ್ರೀ, ಮಾಟಗಾತಿ ಮತ್ತು ನಾಪಿತ (ಹಜಾಮ)ರವಳು ಇವರು ದೂತಿಯರಾಗಲು ಯೋಗ್ಯರೆಂದು ಕೋಕನ ಮತ.

ಸಂಬಂಧಿಕರೂ ದೂತಿಕರ್ಮವನ್ನು ಮಾಡುತ್ತಾರೆ. ಏಕೆಂದರೆ, ಅವರ ಮೇಲೆ ವಿಶ್ವಾಸಕೂಡಿರುತ್ತದೆ. ಮನೆಗೆ ಹೋಗಿ ಬಂದರೆ ಯಾವದೇ ತರದ ಸಂಶಯವಿರುವದಿಲ್ಲ. ಇದಕ್ಕಾಗಿಯೇ ಇವರು ಎಲ್ಲ ದೂತಿಯರಕ್ಕಿಂತಲೂ ಭಯಂಕರರಾಗುತ್ತಾರೆ (ಎಳೆ ಸಿಕ್ಕರೆ ಹಚ್ಚಡ ನುಂಗಿದಂತೆ!) ಕನ್ಯಾಸಂಪ್ರಯುಕ್ತಕದಲ್ಲಿ ಇವಷ್ಟನ್ನು ಸ್ಪಷ್ಟಿಸಿಯೇ 'ಸಾಧ್ಯವಾದರೆ ಅವರ ಹತ್ತಿರ ಸಂಬಂಧ ಕಲ್ಪಿಸಿಕೊಳ್ಳುವ ಯಾರನ್ನಾದರೂ ಬಿಟ್ಟುಬಿಡಬೇಕೆಂದು ಹೇಳಲಾಗಿದೆ. ಯಾರು ದೂತಿಕರ್ಮದಲ್ಲಿ ನಿಪುಣರಿದ್ದಾರೋ ಅವರಿಗೆ ಸಂಬಂಧ (ಆಪ್ತತ್ವದ) ಸಿಕ್ಕರೆ ಅವರ ಭಾಗ್ಯವೇ ತೆರೆಯುವದು. ಇಲ್ಲವಾದರೆ ಏನಕೇನ ಪ್ರಕಾರೇಣ ಸಂಬಂಧವನ್ನವರು ಮಾಡಿಕೊಂಡೇ ಬಿಡುತ್ತಾರೆ. 'ವೇಶ್ಯಾಕುಮಾರಿಯ' ವಿವೇಚನೆಯಲ್ಲಿ ವೇಶ್ಯೆ ಇಲ್ಲವೆ ಚಾರಿತ್ರ್ಯಹೀನ ಮಾತೆಯು ತನ್ನ ಮಗಳ ಕುಂಟಲತನವನ್ನು ಒಳ್ಳೇ ಎಚ್ಚರಿಕೆಯಿಂದ ಮಾಡುತ್ತಾಳೆಂಬುದನ್ನು ನಾವು ವಿವೇಚಿಸಿದ್ದೇವೆ. ಕಾಮಸೂತ್ರಕಾರರು ಕುಲಟೆಯನ್ನೂ ಕೂಡ ಒಂದು ಪ್ರಕಾರದ ವೇಶ್ಯೆಯೆಂದೇ ಗಣನಿಸುತ್ತಾರೆ. ಇಂಥ ತಾಯಿಯಿದ್ದರೆ ತನ್ನ ಮಗಳಿಂದ ಎಂತೆಂತಹ ಆಟಗಳನ್ನು ಆಡಿಸಬಹುದೆಂದು ಯಾರು ಹೇಳಬಲ್ಲರು? ಒಂದು ವೇಳೆ ತಾಯಿಯಿರದಿದ್ದರೆ, ಇಂತಹ ಸ್ತ್ರೀಯರು ಹುಟ್ಟುವತನಕ ತಾಯಿ ಇಲ್ಲವೆ ಭಗಿನಿಯ ಸಂಬಂಧವನ್ನಾದರೂ ಕಲ್ಪಿಸಿಕೊಳ್ಳುತ್ತಾರೆ. ಇವರು ಏನೇನು ಮಾಡಿಸಬಹುದೆಂಬುದನ್ನು ಹೇಳುವದೇ ಅಸಾಧ್ಯ. ಇದಕ್ಕಾಗಿಯೇ ಜನರು ಇಂತಹ ಹೆಂಗಸರನ್ನು ವಿಶ್ವಾಸಯೋಗ್ಯರೆಂದು ಎಂದೂ ತಿಳಿಯುವದಿಲ್ಲ. ಸಂಕೇತ ಸ್ಥಳಗಳ ವಿವೇಚನೆಯಲ್ಲಿ ದೂತಿಯ ಮನೆಯನ್ನು ಸೂಚಿಸಲಾಗಿದೆ.

ಇದರ ಮೇಲೆ ವಾತ್ಸಾಯನನ ಮತವೇನೆಂದರೆ, ಇದು ನಾಯಿಕೆಯ ಮನೆಯಲ್ಲಿಯೂ ಕೂಡ ಆಗುತ್ತದೆ. ಆದರೆ, ಮನೆಯೊಳಗೆ ಹೋಗುವದು ಮತ್ತು ಮನೆಯಲ್ಲಿಂದ ಬರುವ ಮಾರ್ಗವು ಅನ್ಯರಿಗೆ ತಿಳಿಯದಂತೆ ಹೋಗಿ ಬರಲು ಗೊತ್ತಿರಬೇಕು. ಆದೆರಂತೆ, ಅನ್ಯರಿಗೆ ತಿಳಿದು ಗದ್ದಲವಾದರೆ ಹೇಗೆ ಪಾರಾಗಬೇಕೆಂಬುದೂ ಗೊತ್ತಿರಬೇಕು.

**ದೂತಿಯರಲ್ಲಿನ ಭೇದ:** ನಿಸೃಷ್ಟಾರ್ಥಾ, ಪರಿಮಿತಾರ್ಥಾ, ಪತ್ರಹಾರಿ, ಸ್ವಯಂದೂತಿ, ಮೂಢದೂತಿ, ಭಾರ್ಯಾದೂತಿ, ಮೂಕದೂತಿ ಮತ್ತು ವಾತದೂತಿ ಎಂದು ಎಂಟುಪ್ರಕಾರಗಳಿವೆ.

೧) ಯಾವಳು ನಾಯಕ ಮತ್ತು ನಾಯಿಕೆಯರ ನಿಜವಾದ ಇಚ್ಛೆಗನುಸಾರವಾಗಿ, ಇಂಗಿತವನ್ನು ತಿಳಿದುಕೊಂಡು ತನ್ನ ಬುದ್ಧಿಮತ್ತೆಯಿಂದ ಕಾರ್ಯಸಾಧನೆಯನ್ನು ಮಾಡಿಕೊಡುವವಳೇ ನಿಸೃಷ್ಟಾರ್ಥಾ ದೂತಿ.

೨) ಕಾರ್ಯದ ಒಂದು ಭಾಗವನ್ನು (ಇಬ್ಬರಲ್ಲಿ ಒಬ್ಬರ) ಅವರಂತೆ ಅಭಿಯೋಗದ ಒಂದು ಭಾಗವನ್ನು ಮಾತ್ರ ತಿಳಿದುಕೊಂಡು, ಉಳಿದೆಲ್ಲ ಉಪಾಯಗಳನ್ನು ಸ್ವಯಂ ತಾನೇ ಆಗಿ ಮಾಡುವವಳೇ ಪರಿಮಿತಾರ್ಥಾ ದೂತಿ.

೩) ಕಾರ್ಯವು ಸ್ಥಿರವಾದ ನಂತರ (ಪರಿಚಯವು ಗಾಢವಿದ್ದವರ) ಕೇವಲ ಪತ್ರದ್ವಾರದಿಂದ ಇಲ್ಲವೇ ಬಾಯಿಂದ ಇತ್ತಕಡೆಗಿನ ಸುದ್ದಿಯನ್ನು ಅತ್ತಕಡೆಗೆ ಒಯ್ಯುವವಳೂ ಮತ್ತು ಅತ್ತಕಡೆಗಿನ ಸುದ್ದಿಯನ್ನು ಇತ್ತಕಡೆಗೆ ತರುವವಳೂ ಪತ್ರಹಾರಿ ದೂತಿ.

೪) ಸ್ವಯಂ ದೂತಿಯರಲ್ಲಿ ಎರಡು ತರಹದವರಿದ್ದಾರೆ— ಅನ್ಯರಿಗಾಗಿ ಅನ್ಯರಿಂದ ನಿಯೋಜಿಸಲ್ಪಟ್ಟವಳು ಒಬ್ಬಳು ಮತ್ತು ತನ್ನ ಸಲುವಾಗಿ ತಾನೇ ಆದವಳೂ ಇನ್ನೊಬ್ಬಳು. ಯಾವಳು ತನಗಾಗಿಯೇ ಆಗುತ್ತಾಳೋ ಅವಳಿಗೆ ಸ್ವಯಂ ದೂತಿಯೆನ್ನುತ್ತಾರೆ. ಅವಳು ಏನು ಮಾಡುತ್ತಾಳೆಂದರೆ:— ಅನ್ಯಳು ದೂತಿಯೆಂದು ಕಳಿಸಿದರೆ ತಾನೇ ನಾಯಕನ ಜತೆಗೆ ಕೆಲೆಯುತ್ತಾಳೆ. ಯಾವುದೇ ತರಹದ ಅವನ ಜತೆಗಿನ ಅನುಭವ ವಿರದಿದ್ದರೂ ಸ್ವಪ್ನ ಸಮಾಗಮವನ್ನು ಹೇಳುತ್ತಾಳೆ. ತನ್ನ ಅವನತಿ,ಅದರಂತೆ ಅವನ ಸ್ತ್ರೀಯರನ್ನು ನಿಂದಿಸುತ್ತಾಳೆ. ಅವನ ಕಾರಣವಾಗಿ ಮತ್ಸರವನ್ನು ತೋರಿಸುತ್ತಾಳೆ ಮತ್ತು ಉಗುರು ಹಾಗೂ ಹಲ್ಲುಗಳಿಂದ ಗುರುತು ಮಾಡಿ ಏನಾದರೂ ಕೊಡುತ್ತಾಳೆ. ಅಲ್ಲದೆ ತನ್ನ ತಾಯಿ-ತಂದೆಗಳು ಅವನಿಗೇ ತನ್ನನ್ನು ಲಗ್ನಮಾಡಿಕೊಡಬೇಕೆಂದು ಮಾಡಿದ್ದರು ಎಂದು ಹೇಳುತ್ತಾಳೆ. ತಾನು ಮತ್ತು ಅವನ ಸ್ತ್ರೀಯರು ಇವರಲ್ಲಿ ಯಾರು ಸುಂದರರೆಂದು ಅವನನ್ನು ಕೇಳುತ್ತಾಳೆ. ಏಕಾಂತದಲ್ಲಿ ಯಾವಳ

ಸರ್ವಾಂಗೀಣವಾಗಿ ಅನುಕೂಲಳಾಗುತ್ತಾಳೋ, ಅವಳೇ ಸ್ವಯಂದೂತಿ. ಈ ದೂತಿಯಂತೆ ನಾಯಕನೂ ಕೂಡ ಅನ್ಯರ ಸಲುವಾಗಿ ಕಾರ್ಯೋನ್ಮುಖನಾದಾಗ ತಾನೇ ಅದನ್ನು ಉಪಯೋಗಿಸಿದರೆ ಆಗ ಅವನಿಗೆ ಸ್ವಯಂದೂತನೆನ್ನುತ್ತಾರೆ.

೫) ನಾಯಕನ ಮರುಳ ಹೆಂಡತಿಗೆ ವಿಶ್ವಾಸ ಹುಟ್ಟಿಸಿ ಇಲ್ಲವೆ, ಏನಾದರೂ ಕಷ್ಟತರವಾದ ಅವಳ ಹೃದಯದ ಅಂತರಾಳದಲ್ಲಿ ಸೇರಿ ನಾಯಕನ ವಿಷಯಕ್ಕೆ ಕೇಳುವದು, ಯೋಗಗಳನ್ನು ಕಲಿಸುವದು, ಅಭಿಸೂಚಕವಾದ ಶೃಂಗಾರ ಮಾಡುವದು, ಪತಿಯಿಂದ ಅವಳು ಬೇಸರಿಸುವಂತೆ ಮಾಡುವದು, ತಾನೇ ಆ ಸ್ತ್ರೀಯಳ ದೇಹದಮೇಲೆ ಉಗುರು-ಹಲ್ಲುಗಳಿಂದ ಗುರುತುಮಾಡುವದು. ಅವಳಿಗೆ ಕಷ್ಟಕೊಟ್ಟು, ಅದರಿಂದ ನಾಯಕನಿಗೆ ತನ್ನ ಮನೋಗತವನ್ನು ತಿಳಿಸುವವಳೇ ಮೂಢದೂತಿ.

೬) ತನ್ನ ಮೂರ್ಖ ಹೆಂಡತಿಯನ್ನು ನಾಯಕನಮೇಲೆ ಪ್ರಯೋಗಿಸಲು ಕಳಿಸುವದೇ ಭಾರ್ಯಾದೂತಿ.

೭) ಯಾರಿಗೆ ಒಳಿತು ಕೆಡುಕುಗಳ ಜ್ಞಾನವಿರುವದಿಲ್ಲವೋ ಅಂತಹ ಬಾಲಕ ಪರಿಚಾರಕರಿಗೆ ಶುದ್ಧ ಉಪಾಯಗಳಿಂದ ಕಳಿಸಿ, ಗುರುತು ಪರಿಚಯಗಳು ಚನ್ನಾಗಿ ಆದನಂತರ ಮಾಲೆಯಲ್ಲಿ ಇಲ್ಲವೆ ಕರ್ಣಪತ್ರಗಳಲ್ಲಿ ಗುಪ್ತ ಲೇಖನಗಳನ್ನಿಟ್ಟು, ಉಗುರು-ಹಲ್ಲುಗಳಿಂದ ಗುರುತು ಮಾಡಿ ಕಳಿಸಬೇಕು. ಇವರಂತೆ ಯಾವ ಕಾರ್ಯಗಳನ್ನು ಮಾಡಲಾಗುತ್ತದೆಯೋ ಅದಕ್ಕೆ ಮೂಕ ದೂತಿಯೆನ್ನುತ್ತಾರೆ. ಅವುಗಳ ಪ್ರತ್ಯುತ್ತರವನ್ನು ಅದೇ ನಾಯಿಕೆಯಿಂದ ಕೇಳಬೇಕು.

೮) ಅನ್ಯರಿಗೆ ತಿಳಿಯಬಾರದಂಥ ಆದರೆ ತಮ್ಮಿಬ್ಬರಿಗೇ ತಿಳಿಯುವಂಥ, ದ್ವಂದ್ವಾರ್ಥವುಳ್ಳ ಪದಗಳನ್ನು ಉದಾಸೀನ ಭಾವದಿಂದ ಉಚ್ಚರಿಸಿ ಅದಕ್ಕುತ್ತರವನ್ನು ಅದರಂತೆಯೇ ಸ್ವೀಕರಿಸುವದೇ ವಾತದೂತಿ.

**ಮೂರು ತರಹದ ದೂತಿಯರಾರು?** ವಿಧವೆ, ಕೊರವಂಜಿ, ಭಿಕ್ಷುಕಿ, ಹೊಲಿಗೆ ಕೆಲಸಮಾಡುವವಳು ಅಥವಾ ಮಕ್ಕಳನ್ನು ನೋಡಿಕೊಳ್ಳುವವಳು. ಇವಿಷ್ಟು ಜನರು ತಕ್ಷಣ ಪ್ರವೇಶದೊರಕಿಸುತ್ತಾರಲ್ಲದೆ ವಿಶ್ವಾಸಪಾತ್ರರೂ ಆಗುತ್ತಾರೆ. ಇವಕ್ಕಂತೇ ಅವರು ದೂತಿ ಕಾರ್ಯಕ್ಕೆ ಪ್ರಾಪ್ತರಾಗುತ್ತಾರೆ.

ಗಾಗಿ ಕಳಿಸುತ್ತಾರೆ. ಅಲ್ಲಿ ಅವರು ರಾಜನಿಂದ ಉಪಯೋಗಿಸಲ್ಪಟ್ಟ ನಂತರ ತಿರುಗಿ ಬರುತ್ತಾರೆ. (ದಕ್ಷಿಣ ದೇಶದಲ್ಲಿ ವತ್ಸ ಮತ್ತು ಗುಲ್ಮರೆಂಬ ಇಬ್ಬರು ಸಹೋದರರಿದ್ದರು. ಅವರು ನಿರ್ಮಿಸಿದ ದೇಶಕ್ಕೆ ವಾತ್ಸಗುಲ್ಮಕವೆಂದು ಅನ್ನುತ್ತಾರೆ. ಅಲ್ಲಿಯ ಜನರ ಹಣೇಬರಹವಿದು.)

**ವಿದರ್ಭದ ರೀತಿ:** ವಿದರ್ಭ ದೇಶದಲ್ಲಿನ ರಾಣಿಯರು ಪ್ರಜಾವರ್ಗದ ಸುಂದರ ಸ್ತ್ರೀಯರನ್ನು ಪ್ರೇಮದ ಸೋಗಿನಿಂದ ತಮ್ಮಲ್ಲಿ ತಿಂಗಳೆರಡುತಿಂಗಳ ವರೆಗೆ ಇಟ್ಟುಕೊಳ್ಳುತ್ತಾರೆ. ಇದರ ಪ್ರಯೋಜನವು ರಾಜನಕೂಡ ಅವರ ಸಹವಾಸ ಮಾಡಬೇಕೆಂಬುದೇ ಇದೆ.

**ಅಪರಾಂತದ ರೀತಿ:** ಅಪರಾಂತದಲ್ಲಿ ತಮ್ಮ ಸುಂದರ ಸ್ತ್ರೀಯರನ್ನು ರಾಜನಿಗೆ ಇಲ್ಲವೆ ಪ್ರಧಾನಿಯರಿಗೆ ಪ್ರೇಮಕಾಣಿಕೆಯೆಂದು ಕೊಡುವ ಪರಿಪಾಠವಿದೆ.

**ಸೌರಾಷ್ಟ್ರದ ರೀತಿ:** ಸೌರಾಷ್ಟ್ರದಲ್ಲಿ ನಗರವಾಸಿನಿಯರು ಮತ್ತು ಗ್ರಾಮವಾಸಿನಿಯರು ಗುಂಪುಕಟ್ಟಿಕೊಂಡು ಇಲ್ಲವೆ ಒಬ್ಬೊಬ್ಬರಾಗಿ ರಾಜ ಮಹಲಿಗೆ ಹೋಗುವ ಪರಿಪಾಠವಿದೆ.

ಇದರಂತೆ ಪರಸ್ತ್ರೀಯರ ಕೂಡ ಮಾಡಬಹುದಾದ ಅನ್ಯ ಕಾಮಕೇಳಿಗಳ ಪ್ರಯೋಗಗಳೂ ಇವೆ. ಇವುಗಳನ್ನು ರಾಜರು ಮೊದಲಿಗೆ ತಮ್ಮ ದೇಶದಲ್ಲಿ ಮಾಡಿರುತ್ತಾರೆ. ಅವು ಈಗಲೂ ಪ್ರಚಲಿತವಿವೆ. ಆದರೂ ರಾಜಧರ್ಮ ವ್ಯಭಿಚಾರಕ್ಕಾಗಿಯಲ್ಲ. ಯಾವನು ಪ್ರಜಾಜನರನ್ನು ಪ್ರಸನ್ನವಾಗಿಡುತ್ತಾನೋ ಅವನೇ ರಾಜನು. ರಾಜನಿಗೆ ಪ್ರಜರು ಸಂತತಿಯಂತಿರುತ್ತಾರೆ. ತನ್ನ ಸ್ವಂತದ ಸಂತಾನದಕ್ಕಿಂತಲೂ ಪ್ರಜರೇ ಅವನಿಗೆ ಹೆಚ್ಚಿನ ಆತ್ಮೀಯರು. ಯಾವಾಗ ಅವನು ಚತುರ್ವರ್ಣದವರ ಗುರುವೆಂದು ತಿಳಿಯಲ್ಪಡುತ್ತಾನೋ ಆಗ ಅವನು ಎಲ್ಲರ ತಾಯಿ-ತಂಗಿಯರು ತನ್ನ ತಾಯಿ-ತಂಗಿಯರೆಂದು ಅವರು ಹೇಗೇ ಇರಲಿ, ತಿಳಿದುಕೊಳ್ಳಬೇಕಾಗುತ್ತದೆ; ಇದುವೇ ಸತ್ಯ. ಯಾವಾಗ ಅವನು ಎಲ್ಲರ ತಂದೆಯೋ ಆಗ ಎಲ್ಲರೂ ಅವನ ಮಕ್ಕಳೇ ಸರಿ; ಅಂದಮೇಲೆ ಎಲ್ಲರ ಕೂಡ ಅವನ ವ್ಯವಹಾರವು ತಂದೆ-ಮಕ್ಕಳ ವ್ಯವಹಾರದಂತಿರಬೇಕು.

ಭಾರತದಲ್ಲಿನ ಪ್ರಾಚೀನ ರಾಜರ ವ್ಯವಹಾರವು ಹೀಗೆಯೇ ಇತ್ತು. ಪ್ರಜರು ಅವರ ಮಕ್ಕಳು ಮತ್ತು ಅವರು ಪ್ರಜರ ನಿಜವಾದ ತಂದೆಗಳಾಗಿದ್ದರು. ಸ್ವಂತ ಮಕ್ಕಳೂ ಪ್ರಜಾಜನರ ಪಿತಾ-ಪಿತಗಳ ಮುಂದೆ ಯಃಕಶ್ಚಿತ್ ವಾಗಿದ್ದರು. ಪ್ರಜರ ಕೂಡ ದುರ್ವ್ಯವಹಾರಮಾಡುವ ಸ್ವಂತ ಮಕ್ಕಳನ್ನೂ ಕೂಡ ಅವರು ಸಹಿಸುತ್ತಿರಲಿಲ್ಲ. ಇದಕ್ಕಾಗಿಯೇ ಇಂದಿನ ದೀನ-ದರಿದ್ರ ಭಾರತವು ಅವರ ನಾಮಸ್ಮರಣೆಯನ್ನು ಮಾಡುತ್ತಿದೆ. ದಶರಥ ಮಹಾರಾಜನು ಪ್ರಜರ ರಕ್ಷಣಾರ್ಥವಾಗಿ ಶನಿದೇವರ ತನಕವೂ ಹೋಗಿದ್ದನು. ಆ ಜನರಲ್ಲಿ ರಾಜ್ಯವು ತಮ್ಮ ಭೋಗಾರ್ಥವಾಗಿ ಇದೆ ಎಂಬ ಭಾವನೆಯಿರಲಿಲ್ಲ, ದಂಡವು ದ್ವೇಷಭಾವಕ್ಕಾಗಿ ಇರಲಿಲ್ಲ. ಆದರೆ, **"ನಿಹಂತಿ ದಂಡೇನ ಸ ಧರ್ಮವಿಪ್ಲವಮ್"**, ಮರ್ಯಾದೆಯ ರಕ್ಷಣಾರ್ಥವಾಗಿ ಮತ್ತು ಪಾಪಿಯನ್ನು ಶುದ್ಧ ಮಾಡುವದಕ್ಕಾಗಿ ಮಾತ್ರ ದಂಡವನ್ನು ಎತ್ತಲಾಗುತ್ತಿತ್ತು. ಶಾಂತನು (ಮಹಾಭಾರತದಲ್ಲಿನ ಭೀಷ್ಮಾಚಾರ್ಯರ ತಂದೆ) ಅಂಬಿಗರವನ ಮಗಳನ್ನು ಮೋಸ--ಕಪಟಗಳಿಂದ ಹಾಗೂ ಬಲಾತ್ಕಾರದಿಂದ ವಶಮಾಡಿಕೊಳ್ಳಲು ಬರುತ್ತಿರಲಿಲ್ಲವೇ? ಅಂತಹ ಕಾಮಾತುರತೆಯಲ್ಲಿಯೂ ಕೂಡ ಆತನು ಇವರಂತೆ ಮಾಡಲಿಲ್ಲ. ಅವಳಿಗೆ ತನ್ನ ಪಟ್ಟರಾಣಿಯ ಪದವನ್ನು ಕೊಡಿಸಿಯೇ ಪ್ರಸನ್ನಮಾಡಿಕೊಂಡನು. ಈ ಎಲ್ಲ ಇತಿಹಾಸಗಳನ್ನು ನೋಡಿದರೆ ಪೂರ್ವಾಚಾರ್ಯರ ಪರಂಪರೆಯಿಂದ ಈಗಿನ ಭಾರತೀಯ ರಾಜರೂ ಕೂಡ ಪರಸ್ತ್ರೀಗಮನದಷ್ಟು ಕೆಡುಕಾದ ಅನ್ಯಾಯವಾದ ಕಾರ್ಯವು ಇಲ್ಲವೆಂದು ತಿಳಿಯುತ್ತಾರೆ. ಅಂದಮೇಲೆ ಪ್ರಾಚೀನ ಭಾರತದ ರಾಜರು ಪ್ರಜರ ತಂಗಿ ಮಕ್ಕಳನ್ನು ಕೆಡಿಸುವ ಇಂತಹ ರೀತಿಗಳನ್ನು ಪ್ರಚಾರದಲ್ಲಿ ತಂದು ತಮ್ಮ ಮುಖಕ್ಕೆ ಕಪ್ಪು ಬಳಿದುಕೊಂಡರೆಂಬ ಬಗ್ಗೆ ನನ್ನ ವಿಶ್ವಾಸ ಕೂಡ್ರುವದಿಲ್ಲ. ಬೇರೆಯವರ ಅನುಕರಣೆಯಿದ್ದರೆ ಮಾತ್ರ ಇದ್ದಿರಬಹುದು. ಯಾಕೆಂದರೆ, ಭಾರತದ ಪತನ ಪ್ರಾರಂಭದಿಂದ ಇಲ್ಲವೆ ಪತನದ ಮಧ್ಯದಲ್ಲಿ ಯಾವನಾದರೊಬ್ಬ ಉದ್ದಂಡ ರಾಜನು ಅನ್ಯ ದೇಶದಲ್ಲಿನ ಇಂತಹ ರೀತಿಯನ್ನು ಇಲ್ಲಿ ಪ್ರಚಲಿತಮಾಡಿ ಒಂದಾನೊಂದು ವೀರ ಹೃದಯದ ಕೋಪದಿಂದ ಭಸ್ಮೀಭೂತನಾಗಿ ಪರಂಧಾಮವನ್ನೈದಿರಬೇಕು. ವಾತ್ಸ್ಯಾಯನನು ಆಗಿನ ಪ್ರಚಾರವನ್ನು ತೆಗೆದುಕೊಂಡು ಬರೆದಿರುತ್ತಾನೆಯೇ

ಹೊರತು ಈಗ ಈ ದೇಶದಲ್ಲಿ ಇದೇ; ಆಗ ಇಂತಹ ರೀತಿ ಇದ್ದಿಲ್ಲವೆಂಬು. ಅಂದಮೇಲೆ ಇದು ಎಲ್ಲಿಂದ ಬಂತು? ಭಾರತದಲ್ಲಿನ ಬಿಕ್ಕಟ್ಟಿನ ಸಮಯದಲ್ಲಿ ಇದನ್ನು ಅಧಃಪತನಕ್ಕೀಡಿಸಲು ಕೆಲವು ನೆರೆನಾಡಿನವರು ಬಂದಿದ್ದರು, ಈಗ ದೇಶದಲ್ಲಿ ದ್ವೇಷ, ಅಸ್ಪೃಶ್ಯ ಮತ್ತು ಅಹಮನ್ಯತೆಗಳು ಒಟ್ಟುಗೂಡಿದ್ದವು. ಅಂದಮೇಲೆ ಆ ಪರಕೀಯರು ಎಷ್ಟೊಂದು ಸ್ವೇಚ್ಛಾಚಾರವು ಸಾಧ್ಯವೋ ಅಷ್ಟನ್ನೂ ಮಾಡಿದರು. ದೇಶವನ್ನು ಎಷ್ಟೊಂದು ಭ್ರಷ್ಟ ಮಾಡಬೇಕಿತ್ತೋ ಅಷ್ಟನ್ನೂ ಮಾಡಿದರು. ಬಲಾತ್ಕಾರ ಮತ್ತು ಸ್ತ್ರೀ ಅಪಹರಣಗಳವು ಅವರಲ್ಲಿ ಒಂದು ತಮಾಷೆಯಂತೇ ಆಗಿದ್ದಿತು. ಇಂತಹ ಅತ್ಯಾಚಾರಗಳಿಗೆ ಭಾರತೀಯರು ಎಂದಿಗೂ ತಲೆ ಬಗ್ಗಿಸಲಿಲ್ಲ. ರಾಜದಂಡದ ಹೆಸರಿನಿಂದ ಅವರು ಏನು ಆಗಬಹುದೋ ಅದೆಲ್ಲವನ್ನೂ ಮಾಡಿದರು. ಇದನ್ನೇ ಭಾರತೀಯರು ಅವರಿಂದ ಕಲಿತರು. ,ಇಲ್ಲವಾದರೆ ಸೇವಕನೂ ಕೂಡ ತನ್ನ ಮಗನಂತೆಯೇ ಆಗುತ್ತಾನೆ. ಅವನ ಪರಿವಾರವನ್ನು ಚರಿತ್ರಹೀನ ಮಾಡುವದೆಂದರೆ ಸೊಸೆಯನ್ನು ಆದರ್ಶಹೀನಳನ್ನಾಗಿ ಮಾಡಿದಂತೆಯೇ ಸರಿ. ಯಾರು ಈ ಪ್ರಕಾರ ಮಾಡುತ್ತಾರೋ ಅವರ ರಾಜದಂಡವು ಎಂದಿಗೂ ಸ್ಥಿರವಾಗಿರುವದಿಲ್ಲ. ಅಂದರೆ, ಯಾರು ಈ ರೀತಿಯಾಗಿ ಮಾಡುತ್ತಾರೋ ಅವರ ಆಳಿಕೆ ಒಂದೆರಡು ದಿನಗಳ ಮಟ್ಟಿಗೆ ಮಾತ್ರ ಇದಕ್ಕೆ ವ್ಯತಿರಿಕ್ತವಾಗಿ ಎಲ್ಲಿಯಾದರೂ, ಎಂತಹ ಘನವಾದ ಸರಕಾರದ ಅಧೀನದಲ್ಲಿದ್ದ ಚಿಕ್ಕ ರಾಜರು, ಇಂತಹ ಕೃತ್ಯಗಳನ್ನು ಮಾಡುತ್ತಿದ್ದರೆ ಅದು ಕಾಲಪ್ರಭಾವವಲ್ಲದೆ ಬೇರೆಯಲ್ಲ. ಪಾಪಿಗಳೂ-ಪುಣ್ಯವಂತರೂ ಎಲ್ಲ ಕಡೆಗೂ ಇದ್ದಾರೆ.

ಪ್ರಜಾಹಿತೈಷಿಗಳಾದ ರಾಜರು ಶತ್ರು ಆಕ್ರಮಣಗಳಿಂದ ಜಯಶೀಲರಾಗಿ ತಮ್ಮ ದೇಶವನ್ನು ಸುಖ-ಸಮೃದ್ಧಿಯಿಂದ ತುಂಬಿದ್ದನ್ನಾಗಿ ಮಾಡುವದೇ ಅವರ ಕರ್ತವ್ಯದದೆಯಲ್ಲದೆ, ಇಂತಹ ನೀಚ ಕೆಲಸಗಳಿಗಾಗಿ ಅಲ್ಲ. ಯಾವ ರಾಜನು ಪರಸ್ತ್ರೀಗಮನಾಭಿಲಾಷಿಯಿರುತ್ತಾನೋ ಅವನು ಎಂದಿಗೂ ಜಯಪ್ರಿಯನೆನಿಸುವದಿಲ್ಲ. ಏಕೆಂದರೆ ಅವನು ತನ್ನ ದೇಹದಲ್ಲಿನ ಕಾಮ-ಕ್ರೋಧ-ಮೋಹಾದಿಗಳೆಂಬ ಷಡ್ವೈರಿಗಳನ್ನು ಕೂಡ ಜಯಿಸಿರುವದಿಲ್ಲ. ಎಲ್ಲರಕ್ಕಿಂತಲೂ ಶ್ರೇಷ್ಠ ಶತ್ರುಗಳು ಇವೇ ಇರುತ್ತವೆ.

ಯಾವ ರಾಜನು ಇವುಗಳಮೇಲೆ ತನ್ನ ಪ್ರಭುತ್ವವನ್ನು ನಡೆಸುತ್ತಾನೋ ಅವನದೇ ಜಯ-ಜಯಕಾರವಾಗುತ್ತದೆ, ಅವರೇ ಭೂಮಿಯನ್ನು ಗೆಲ್ಲುತ್ತಾರೆ.

---

## ಅಧ್ಯಾಯ : ೬

# ಅಂತಃಪುರವೃತ್ತ ಪ್ರಕರಣ

ಯಾವ ಪ್ರಕಾರ ರಾಜನಿಗೆ ಅನ್ಯರಲ್ಲಿ ಹೋಗಿ ಕೆಟ್ಟ ಕೆಲಸಗಳನ್ನು ಮಾಡಲಿಕ್ಕೆ ಬರುವಂತಿಲ್ಲವೋ ಅದರಂತೆ ಅಂತಃಪುರದಲ್ಲಿರುವ ಸ್ತ್ರೀಯರಿಗೂ ಹೊರಗೆ ಹೋಗಲಿಕ್ಕೆ ಬರುವಂತಿರುವದಿಲ್ಲ. ಅಥವಾ ಅವರ ಹತ್ತಿರ ಯಾವನಾದರೊಬ್ಬನು ಗುಪ್ತವಾಗಿ ಸೇರಿಕೊಳ್ಳುವಂತೆಯೂ ಇರುವದಿಲ್ಲ. ಆದರೆ, ಕಾಮುಕೇಳಿಗಳಿಗೆ ಅಲ್ಲಿಯೂ ಸಾಕ್ಷೇಪತೆಯಿದೆ. ಅಲ್ಲಿ ನಾಯಕನ ಪ್ರವೇಶ ಮತ್ತು ಅವರ ಕಾಮುಕೇಳಿ ಈ ಎರಡೂ ಬೇಕಾಗುತ್ತವೆ. 'ಅದಕ್ಕಾಗಿ ಎರಡೂ ತೆರನ ಅಂತಃಪುರಗಳನ್ನು ಇನ್ನು ಮುಂದೆ ಹೇಳಲಾಗುತ್ತಿದೆ.

ಈ ಎರಡರಲ್ಲಿಯೂ ಮೊದಲಿಗೆ ಅಂತಃಪುರವಾಸಿನಿಯರ ಸಮಾಚಾರವನ್ನು ಹೇಳುತ್ತಾರೆ, ಏಕೆಂದರೆ ಅಲ್ಲಿರುವವರು ಏನು ಮಾಡುತ್ತಿರುತ್ತಾರೆಂಬುದು ಮೊದಲು ಮತ್ತು ಯಾವನಾದರೂ ಒಳಸೇರುವದು ಹಿಂದಿನಿಂದ, ಇದರಂತೆ ತಿಳಿಯಬೇಕಾಗುತ್ತದೆ:--

ಅಂತಃಪುರದಲ್ಲಿರುವವರಿಗೆ ಪಹರೆಯ ಕಾರಣವಾಗಿ ಅನ್ಯ ಪುರುಷರ ದರ್ಶನವಾಗುತ್ತಿರುವದಿಲ್ಲ. ಅಂತಃಪುರದ ತಾತ್ಪರ್ಯವು, ಅಂತಃಪುರದಲ್ಲಿನ ಅಂಜುಬುರುಕ ಸ್ತ್ರೀಯರಿಗಾಗಿ ಅದೆ. ಜಡ ಮಹಲಿನಿಂದ ಯಾವ ತೃಪ್ತಿ ತಾನೇ ಸಿಗಬಹುದು? ಅವರ ಪತಿಯಿದ್ದಾನೆ, ಆದರೂ ಅವರಿಗೇಕೆ ತೃಪ್ತಿಯಿಲ್ಲ? ಇದಕ್ಕೆ ಉತ್ತರವು 'ಅವರ ಪತಿ ಒಬ್ಬನಿದ್ದಾನೆ'. ಏನು, ಒಬ್ಬನೇ ತೃಪ್ತಿಯನ್ನು ಕೊಡಲಾರನೋ? ಈ ಶಂಕೆಗೆ ಉತ್ತರವರನ್ನು ಕೊಡುತ್ತಾರೆ: ಅವನು ಬಲು ಜನ ಹೆಂಡಂದಿರ. ಒಬ್ಬನೇ ಒಬ್ಬನಾದ

ದಾಸಿಯರನ್ನು ಭೆಟ್ಟಿಯಾಗುವ ಸಿಮಿತ್ಯವನ್ನು ಮಾಡಬೇಕು. ಯಾವಳಿಗೆ ಆಕಾಂಕ್ಷೆಯಿದೆಯೋ ಆವಳು ಮೇಲಿಂದ ಮೇಲೆ ನೋಡುತ್ತಿದ್ದರೆ, ತಾನಾ ದರೂ ಮೇಲಿಂದಮೇಲೆ ಆಕಳನ್ನು ನೋಡಿ ತನ್ನ ಭಾವ ಮತ್ತು ಸಂಜ್ಞೆ ಗಳನ್ನು ಮಾಡಬೇಕು. ಆವಳು ಹೋಗಿಬರುವಂಥ ಸ್ಥಳಗಳಲ್ಲಿ ಆವಳ ಚಿತ್ರದ ಜತೆಗೆ ತನ್ನ ಚಿತ್ರವನ್ನೂ ತಯಾರುಮಾಡಿ ಇರಿಸಬೇಕು. ದ್ವಂದ್ವಾ ರ್ಥವುಳ್ಳ ಗೀತಗಳುಳ್ಳ ವಸ್ತುಗಳನ್ನು, ಗುರುತುಮಾಡಿದ ಆಟಿಗೆಯ ಸಾಮಾನು ಮುಂತಾದವುಗಳನ್ನು ಅಲ್ಲಿ ಇರಿಸಬೇಕು.

ಆವಳಿಂದ ಇಸ್ಸೊಮ್ಮೆ ಬಂದ ಉತ್ತರವನ್ನು ಚನ್ನಾಗಿ ಅರ್ಥಮಾಡಿ ಕೊಂಡು ಒಳಗೆ ಹೋಗುವ ಪ್ರಯತ್ನಮಾಡಬೇಕು. ಯಾವ ಸ್ಥಳದ ವಿಷಯವಾಗಿ ಅವಳಿಗೆ ನಿಶ್ಚಿತವಾದ ಸುದ್ದಿ ಹತ್ತಿದೆಯೋ ಆ ಸ್ಥಳದಲ್ಲಿ ಮೊದಲಿಗೇ ಗುಪ್ತವಾಗಿ ಕುಂತಿರಬೇಕು. ಅಥವಾ ರಕ್ಷಕರ ವೇಷದಿಂದ ತೋರಿಸಿದ ವೇಳೆಗೆ ಸರಿಯಾಗಿ ಅಂತಃಪುರ ಪ್ರವೇಶಮಾಡಬೇಕು. ಇಲ್ಲವೆ, ಅಗಸನು ತರುವ ಒಗೆದ ಬಟ್ಟೆಗಳಲ್ಲಿ ಇಲ್ಲವೆ ಒಳಗಿನಿಂದ ಒಗೆಯಲಿಕ್ಕೆ ಒಯ್ಯುವ ಬಟ್ಟೆಗಳಲ್ಲಿ ಆಡಗಿಕೊಂಡು, ಹೊರಗಿಂದ ಒಳಗೆ ಅಥವಾ ಒಳ ಗಿಂದ ಹೊರಗೆ ಬರಬಹುದು. ಅಥವಾ ಯೋಗ ಸಾಧನೆಯಿಂದ ತನ್ನ ನೆರಳು-ರೂಪಗಳು ಕಾಣದಂತೆ ಸಾಧನೆಮಾಡಿಕೊಂಡು ಒಳಗೆ ಹೋಗ ಲಿಕ್ಕೂ ಬರುತ್ತದೆ. (ಯೋಗಸಾಧನೆಯ ಮೂಲವು ಭಾರತವಾದರೂ ಆದೀಗ ಐರೋಪ್ಯರಲ್ಲಿ ಹಿಪ್ನಾಟಿಜಂ [Hypnotism] ಎಂದು ವಿಶೇಷ ವಾದ ಮಹತ್ವವನ್ನು ದೊರಕಿಸಿದೆ. ಇದರ ಸಾಧನೆಯಿಂದ ಎಂತಹ ಅಸಾಧ್ಯತೆಯನ್ನೂ ಸಾಧ್ಯಮಾಡಿಕೊಳ್ಳಬಹುದು. ಅನು.) ದೀವಳಿಗೆ ಮುಂತಾದ ಉತ್ಸವಗಳಲ್ಲಿ ಏನಾದರೂ ಕೊಡುವವರ ಇಲ್ಲವೆ ತರುವವರ ವೇಷದಲ್ಲಿಯೂ ಹೋಗಿಬರಲಿಕ್ಕೆ ಬರುತ್ತದೆ. ಅಥವಾ ಸುರಂಗ ಮಾರ್ಗ ದಿಂದಲೂ ಕೂಡ ಹೋಗಿ ಬರಬಹುದು. ಅಲ್ಲದೆ ವಸ್ತುಗಳನ್ನು ಒಳ ಗಿಂದ ಹೊರಗೆ ಇಲ್ಲವೆ ಹೊರಗಿನಿಂದ ಒಳಗೆ ಒಯ್ಯುವಾಗ, ಕೈಲಿಂದ ಪಾನಕಗಳನ್ನು ಒಳ-ಹೊರಗೆ ಒಯ್ಯುವಾಗ, ಕುಡಿತದ ಉತ್ಸವಗಳಲ್ಲಿ, ದಾಸಿಯರು ಅತ್ತಿತ್ತ ತಿರುಗಾಡುತ್ತಿರುವಾಗ, ಮನೆಗಳನ್ನು ಬದಲಿಸುವಾಗ ಮತ್ತು ಪಹರೆಗಳ ಬದಲಾವಣೆಯ ಸಮಯಗಳಲ್ಲಿ, ಉದ್ಯಾನ ಯಾತ್ರೆಗೆ

ಹೋಗುವಾಗ ಇಲ್ಲವೆ ಬರುವಾಗ ಮತ್ತು ರಾಜನು ದೂರ ದೇಶಕ್ಕೆ ಪ್ರಯಾಣಕ್ಕೆ ಹೋದ ಸಮಯಗಳಲ್ಲಿ ಯುವಕರು ಬಹುತರವಾಗಿ ರಾಜ ಮಹಲುಗಳಲ್ಲಿ ಹೋಗಿ ಬರುವದನ್ನು ಮಾಡುತ್ತಾರೆ.

ಇದರ ಮೇಲೆ ಒಂದು ಶಂಕೆ ಉದ್ಭೂತವಾಗುತ್ತದೆ. ಅದೇನೆಂದರೆ; ಯಾವ ರಾಜಮಹಲದ ಸ್ತ್ರೀಯರಿಗೆ ಪರಿಚಯವಿಲ್ಲವೋ ಅವರು ಇದನ್ನು ನೋಡಿ ರಹಸ್ಯ ಸ್ಫೋಟಮಾಡಿದರೆ? ಇದಕ್ಕುತ್ತರವನ್ನು ಮುಂದಿನಂತೆ ಕೊಡುತ್ತಾರೆ.

ಅಂತಃಪುರದ ಸ್ತ್ರೀಯರು ಪರಸ್ಪರರ ಕಾರ್ಯಗಳನ್ನು ತಿಳಿದು ಕೊಂಡು ತಿರುಗಿ ಎಲ್ಲರೂ ಕಲೆತು ಒಂದೇ ಕಾರ್ಯಸಿದ್ಧಿಗಾಗಿ ಪ್ರಯತ್ನ ಮಾಡುತ್ತಾರೆ. ಇದನ್ನರಿತುಕೊಂಡು ಎಲ್ಲರ ಸಹವಾಸವನ್ನೂ ಮಾಡ ಬೇಕು. ಹೀಗಾದರೆ, ಒಬ್ಬಳ ಹುಳುಕನ್ನು ಇನ್ನೊಬ್ಬಳು ಹೊರಗೆಡವು ವದನ್ನು ಬಿಟ್ಟು ಎಲ್ಲರೂ ತಮ್ಮ ತಮ್ಮ ಪ್ರಾಪ್ತಿಯನ್ನೇ ನೋಡಿಕೊಳ್ಳು ತ್ತಾರೆ.

## ರಾಣಿಯರ ಲೀಲೆಗಳ ಪ್ರಕರಣ

ಮುಚ್ಚುಮರೆಯಿಲ್ಲದ ಕಾಮಕೇಳಿಗಳು ದೇಶಾಚಾರನುಸಾರವಾಗಿ ನಡೆಯುತ್ತವೆ. ಈ ಪ್ರಕರಣದಲ್ಲಿ ಅವನ್ನು ವರ್ಣಿಸುತ್ತಾರೆ.

ಅಪರಾಂತದಲ್ಲಿನ ರಾಜಮನೆತನಗಳಲ್ಲಿ, ಅಂತಃಪುರದ ಪರಿಚಾರಿಕೆ ಯರು, ಸುಂದರ ಪುರುಷರನ್ನು ರಾಜಮಹಲುಗಳಲ್ಲಿ ಸೇರಿಸುತ್ತಾರೆ, ಏಕೆಂ ದರೆ ಅಲ್ಲಿ (ಅಂತಃಪುರ) ರಾಜನ ರಕ್ಷಕರ ಕಾವಲು ಅಲ್ಲಿ ಹೆಚ್ಚಾ ಗಿರುವದಿಲ್ಲ.

ಅಭೀರದಲ್ಲಿ ಕ್ಷತ್ರಿಯರೆಂಬ ರಾಜಮಹಲದ ರಕ್ಷಕರನ್ನು ದಾಸಿಯರು ಅಂತಃಪುರದಲ್ಲಿ ಸೇರಿಸಿಕೊಂಡು ಅಂತಃಪುರವಾಸಿನಿಯರ ಕೂಡ ಅವರ ಸಹವಾಸ ಮಾಡಿಸುತ್ತಾರೆ.

ವಾತ್ಸಗುಲ್ಮಕದಲ್ಲಿ ದಾಸಿಯರು, ದಾಸಿಯರ ವೇಷದಿಂದ ನಾಗರಿಕ ರನ್ನು ಸೇರಿಸಿಕೊಳ್ಳುತ್ತಾರೆ.

ವಿದರ್ಭದ ರಾಜಮನೆತನಗಳಲ್ಲಿ, ರಾಜನಿಗೆ ಅನ್ಯ ಪತ್ನಿಯಿಂದ (ಪತ್ನಿಗಳಿಂದ) ಹುಟ್ಟಿದ ರಾಜಕುಮಾರನ ಕೂಡ ಸಹವಾಸಮಾಡಿ

ಕೊಳ್ಳುವ ಪದ್ಧತಿಯಿದೆ. ಆದರೆ, ತನ್ನ ಸ್ವಂತ (ಔರಸ) ಮಗನ ಕೂಡ ಸಹವಾಸವನ್ನು ಮಾತ್ರ ಮಾಡುವದಿಲ್ಲ.

ಸ್ತ್ರೀ ರಾಜ್ಯದಲ್ಲಿನ ಅಂತಃಪುರವಾಸಿನಿಯರು ತಮ್ಮ ಜಾತಿಯ ಸಂಬಂಧಿಕರಿಂದ ಸಹವಾಸಮಾಡಿಕೊಳ್ಳುತ್ತಾರೆ, ಅನ್ಯರಿಂದ ಇಲ್ಲ.

ಗೌಡ (ಕಾಮರೂಪ) ದಲ್ಲಿ ಬ್ರಾಹ್ಮಣ, ಮಿತ್ರ, ಭೃತ್ಯ, ದಾಸ ಮತ್ತು ಚೇಟಿಯರಿಂದ ಸಹವಾಸಮಾಡಿಸಿಕೊಳ್ಳುತ್ತಾರೆ.

ಸಿಂಧೀಯರಲ್ಲಿ ರಕ್ಷಕರು ಮತ್ತು ಯಾವ ಸೇವಕರಿಗೆ ಅಂತಃಪುರದಲ್ಲಿ ಪ್ರವೇಶಿಸಲು ನಿರ್ಬಂಧವಿಲ್ಲವೋ ಅಲ್ಲದೆ ಒಳಗೆ ಬರಹೋಗಲು ಯಾರಿಗೆ ಅವಕಾಶವಿದೆಯೋ ಅಂಥ ಅನ್ಯ ಪುರುಷರ ಕೂಡ ಅಲ್ಲಿನ ಅಂತಃಪುರವಾಸಿನಿಯರು ಸಹವಾಸಮಾಡಿಸಿಕೊಳ್ಳುತ್ತಾರೆ.

ಹೇಮವತದಲ್ಲಿ ಅಂತಃಪುರ ರಕ್ಷಕರನ್ನು ದ್ರವ್ಯ ಲೋಭದಿಂದ ಅನುಕೂಲರನ್ನಾಗಿ ಮಾಡಿಕೊಂಡು ಸಾಹಸಿ ಜನರು ಒಟ್ಟಾಗಿ ಒಳ ಸೇರುತ್ತಾರೆ.

ವಂಗ, ಅಂಗ ಮತ್ತು ಕಳಿಂಗದಲ್ಲಿ ಹೂವು ಕೊಡುವ ಉದ್ದೇಶದಿಂದ ನಗರದಲ್ಲಿನ ಬ್ರಾಹ್ಮಣರು ಪ್ರವೇಶಮಾಡುತ್ತಿರುತ್ತಾರೆ. ರಾಣಿಯರು ಅವರ ಕೂಡ ಪರದೆಯ ಮರೆಯಿಂದ ಮಾತು-ಕಥೆಗಳನ್ನಾಡುತ್ತಿರುತ್ತಾರೆ. ಈ ರೀತಿಯಾಗಿ ಪರಿಚಯ ವೃದ್ಧಿಯಾದನಂತರ ಅವರಕೂಡ ಸಹವಾಸ ಮಾಡುತ್ತಾರೆ.

ಪ್ರಾಚ್ಯದಲ್ಲಿ ಎಂಟ್ಹತ್ತು ರಾಜಸ್ತ್ರೀಯರು ಕೂಡಿ ಒಬ್ಬೊಬ್ಬ ಯುವಕನನ್ನು ಮುಚ್ಚಿಟ್ಟುಕೊಂಡು ಸರತಿಯಂತೆ ಅವನ ಕೂಡ ಸಹವಾಸಮಾಡುತ್ತಾರೆ.

ಮಾಡುವದಿದ್ದರೆ ಇದರಂತೆ ಪರಸ್ತ್ರೀಗಮನವನ್ನು ಮಾಡಬೇಕೇ ಹೊರತು ಅನ್ಯಥಾ ಅಲ್ಲ.

## ಸ್ವಸ್ತ್ರೀರಕ್ಷಣೆಯ ಪ್ರಕರಣ

ಯಾವ ಉಪಾಯಗಳಿಂದ ಒಬ್ಬನು ಪರಸ್ತ್ರೀಗಮನವನ್ನು ಮಾಡುತ್ತಾನೋ ಅದೇ ಉಪಾಯಗಳಿಂದ ಇನ್ನೊಬ್ಬನು ಅವನ ಸ್ತ್ರೀಯಕೂಡ ಸಮಾಗಮ ಮಾಡಬಹುದು. ಅದರ ಕಾರಣವಾಗಿ ಈ ಪ್ರಕರಣವನ್ನು

ಹೇಳುತ್ತಾರೆ. ಸ್ವಸ್ತ್ರೀರಕ್ಷಣೆಗಾಗಿ ಇದರ ಉಪಯೋಗವಿರುವಂತೆ, ಈ ಕಾರಣಗಳಿಂದಾಗಿ ಸ್ವಸ್ತ್ರೀರಕ್ಷಣೆಯನ್ನೂ ಕೂಡ ಮಾಡಲು ಬರುತ್ತದೆ.

ರಕ್ಷಣೆಯ ವಿಷಯಕ್ಕೆ ಆಚಾರ್ಯರ ಮತ:—

ಕಾಮ—ಕ್ರೋಧ—ಲೋಭ—ಮೋಹ—ಮದ—ಮತ್ಸರ ಇವುಗಳಿಂದ ಯಾರು ಅಲಿಪ್ತರೋ ಅಂಥವರನ್ನು ರಕ್ಷಕರೆಂದು ಇಡಬೇಕೆಂದು, ಗಣಿಕ ಪುತ್ರನ ಮತ.

ಧರ್ಮಿಷ್ಠರೂ, ಸ್ವಾಮಿದ್ರೋಹಕ್ಕಂಜುವವರೂ ಇದ್ದ ನಿರ್ಭೀತ ಧರ್ಮಾತ್ಮರನ್ನು ಸ್ತ್ರೀರಕ್ಷಣೆಗಿಡಬೇಕೆಂದು, ವಾತ್ಸ್ಯಾಯನನ ಮತ.

ತಮ್ಮ ಸ್ತ್ರೀಯರನ್ನು ಪರೀಕ್ಷಿಸುವದೂ ಕೂಡ ಏಕಮಾತ್ರಹಾದ ಉಪಾಯವೆಂದು ಕೆಲವರ ಮತ. ಇದನ್ನೇ ಕೆಳಗಿನ ಸೂತ್ರದಲ್ಲಿ ಹೇಳುತ್ತಾರೆ:—

ಪರಪುರುಷರು ಅಂದಿರುತ್ತಾರೆಂಬುವ ಸೋಗಿನಿಂದ ಏನನ್ನಾದರೂ ಹೇಳುವವಳು, ತನ್ನ ತಾತ್ಪರ್ಯಗಳನ್ನು ಗೌಪ್ಯವಾಗಿಟ್ಟುಕೊಳ್ಳುವಂಥ ಸ್ತ್ರೀಯಿಂದ ತನ್ನ ಸ್ತ್ರೀಯರನ್ನು ಅವರಲ್ಲಿ, ಎಷ್ಟೊಂದು ಪವಿತ್ರತೆ ಅಪವಿತ್ರತೆ ಇದೆಯೆಂಬುದನ್ನು ಪರೀಕ್ಷಿಸಬೇಕೆಂದು, ಬಾಭ್ರವ್ಯನ ಮತ.

ದುಷ್ಟರು ಯುವತಿಯರನ್ನು ವಶಪಡಿಸಿಕೊಳ್ಳುವುದರಲ್ಲಿ ಸಿದ್ಧಹಸ್ತರೆ ಇರುತ್ತಾರೆ ಅದಕ್ಕಾಗಿ, ಸಂಭಾವಿತರನ್ನು ಆಕಸ್ಮಾತ್ತಾಗಿ ದೂಷಿಸಬಾರದೆಂದು, ವಾತ್ಸ್ಯಾಯನನ ಮತ.

ಸ್ತ್ರೀಯರು ವ್ಯಭಿಚಾರಿಣಿಯರಾಗಲಿಕ್ಕೆ ಮುಂದೆ ಹೇಳಿದ ಕಾರಣಗಳಿವೆ:—

೧) ಬಹಳಷ್ಟು ಮಾತುಕತೆಗಳನ್ನಾಡುವದು, ೨) ಯಾರ ಅಂಜಿಕೆಯೂ ಇರದಿರುವದು. ೩) ಪತಿಯಿಂದ ಸ್ವತಂತ್ರಳಾಗುವದು. ೪) ಪುರುಷರ ಕೂಡ ನಿರ್ಭೀತಿಯಿಂದ ಮಾತನಾಡುವದು. ೫) ಪತಿಯ ವಿದೇಶಗಮನದಿಂದ ಒಬ್ಬಳೇ ಇರುವದು. ೬) ವಿದೇಶದಲ್ಲಿರುತ್ತಿರುವದು. ೭) ತನ್ನ ಜೀವನವಿತ್ತವು ಹಾಳಾದರೆ. ೮) ಕುಲಟೆಯರ ಮಿತ್ರತ್ವ. ಮತ್ತು ೯) ಪತಿಯ ಕೂಡ ದ್ವೇಷಕಟ್ಟಿಕೊಳ್ಳುವದು.

ಯಾವ ರೀತಿಗಳಿಂದ ಜಾರರು ಪರಸ್ತ್ರೀಯರನ್ನು ಭ್ರಷ್ಟಗೊಳಿಸುತ್ತಾರೋ ಆ ರೀತಿಗಳನ್ನು ಈ ಶಾಸ್ತ್ರದಿಂದ ತಿಳಿದುಕೊಂಡರೆ ಯಾವನೇ

**ದೂತಿಕಾರ್ಯದ ಸಂಕ್ಷೇಪಣೆ:** ಪತಿಯನ್ನು ದ್ವೇಷಿಸಹಚ್ಚುವದು, ಯಾರ ಜನೆಗೆ ಕೋಪಿಸಬೇಕಾಗಿದೆಯೋ ಅವನನ್ನು ಪ್ರಶಂಸಿಸುವದು. ಅನ್ಯ ಸ್ತ್ರೀಯರ ಮುಂದೆಯೂ ಚಿತ್ರ ಸುರತ-ಸಮಾಗಮಗಳನ್ನು ತೋರಿಸುವದು. ನಾಯಕನ ಅನುರಾಗ ಮತ್ತು ರತಿಕೌಶಲ್ಯದ ವರ್ಣನೆಮಾಡುವದು. ದೊಡ್ಡ ದೊಡ್ಡ ಮನೆತನದ ಸ್ತ್ರೀಯರೂ ಅವನನ್ನು ಬಯಸುತ್ತಾರೆ; ಅವರೆ ಅವನ ನಿಶ್ಚಯವು ದೃಢವಾದದ್ದಿದೆ ಎಂದು ಹೇಳುವದು.

ಯಾವ ಮಾತಿನ ಸಲುವಾಗಿ ಎಂದೆಂದಿಗೂ ನೆನಪು ಕೂಡ ಆಗುವದಿಲ್ಲವೋ, ದೋಷಗಳ ಕಾರಣವಾಗಿ ಯಾವನು ದೂರಾಂತರಕ್ಕೆ ಹೊರಟು ಹೋಗಿದ್ದಾನೋ, ಇಂಥ ವಸ್ತುಗಳನ್ನೂ ಕೂಡ ದೂತಿಯರು ಎದುರಿಗೆ ತಂದು ನಿಲ್ಲಿಸುತ್ತಾರೆ.

---

## ಅಧ್ಯಾಯ : ೫

## ಅರಸರ ಕಾಮುಕೇಳಿಯ ಪ್ರಕರಣ

ಅರಸು ಮನೆತನದವರು ಬೇರಾವ ಮನೆ-ಸ್ಥಳಗಳಿಗೆ ಎಂದಿಗೂ ಹೋಗುತ್ತಿರುವದಿಲ್ಲ, ಅದಕ್ಕಾಗಿ ಇಂತಹ ವಿಷಯಗಳಲ್ಲಿನ ಅವರ ಚಟಿಗಳು ಪೂರ್ಣವಾಗುವದಿಲ್ಲ. ಅಂದಮೇಲೆ ಅವರ ಈ ತರಹ ಚಟಿಗಳು ಹೇಗೆ ಪೂರ್ಣವಾಗುತ್ತವೆ? ಎಂಬುವ ಮಾತನ್ನು ಹೇಳುವದಕ್ಕಾಗಿ ಸಮಯಾವಕಾಶಗಳ ಯೋಜನೆಗಳನ್ನು ಹೇಳುತ್ತಾರೆ. (ಈ ಜನರು ತಮ್ಮ ವಿಕಾರಶಾಂತಿಗಾಗಿ ಶತಪ್ರಯತ್ನ ಮಾಡುತ್ತಿರುವರೂ ಅದನ್ನು ಗುಪ್ತವಾಗಿಯೇ ಮಾಡುತ್ತಾರೆ. ಇಲ್ಲವೆ ಮಾಡುವದಿಲ್ಲ. ಇದರಂತೆ ಅವರು ಮಾಡಲು ಜನಭಯ— ಮತ್ತು ಜನಾನುಕರಣದ ಭಯ. ಇದನ್ನು ಸೂತ್ರಕಾರರು ಉದಾಹರಣೆಗಳ ಸಹಿತವಾಗಿ ವಿಸ್ತರಿಸಿ ಹೇಳಿದ್ದಾರೆ. ಅದು ಇಲ್ಲಿ ಅನವಶ್ಯಕವಾದುದರಿಂದ ಅದರ ತಾತ್ಪರ್ಯವನ್ನಷ್ಟೇ ಹೇಳಲಾಗಿದೆ. **ಅನು.**)

ಬಹುಲಾಷ್ಟಮಿ, ಕೌಮುದೀ ಮತ್ತು ಸುವಸಂತಕ ಮುಂತಾದ ದಿನಗಳಲ್ಲಿ ರಾಜಧಾನಿ, ಜಿಲ್ಲೆ ಮತ್ತು ತಹಸೀಲುಗಳಲ್ಲಿನ ಸ್ತ್ರೀಯರ ಜತೆಗಿನ

ರಾಜಭವನಗಳಲ್ಲಿ ಅಂತಃಪುರ ಚಾರಿಣಿಯರ ಆಟಗಳಾಗುತ್ತವೆ. ಆಟಗಳಲ್ಲಿ ಭೋಜನೋತ್ತರ ನಂತರ ನಗರವಾಸಿನಿಯರಾದ ಸ್ತ್ರೀಯರು ತಂತಮ್ಮ ಗುರುತು ಪರಿಚಯಗಳನುಸಾರವಾಗಿ ಅಂತಃಪುರವಾಸಿನಿಯರ ಬೇರೆ ಬೇರೆ ವಿಶ್ರಾಂತಿ ಸ್ಥಾನಗಳಲ್ಲಿ ಸೇರಿ ಮಾತುಗಳನ್ನಾಡುತ್ತ ಕೂಡ್ರುತ್ತಾರೆ. ಅವರು ಇವರ ಆದರ ಸತ್ಕಾರಗಳನ್ನು ಮಾಡುತ್ತಾರೆ. ಅಲ್ಲಿ ಕುಡಿದು-ತಿಂದು, ಸಂಜೆಯ ಮುಂದೆ ಮನೆಗೆ ಬರುತ್ತಾರೆ.

ಆ ಆಟಗಳಲ್ಲಿ ರಾಜನಿಂದ ನಿಯೋಜಿತಳಾದ ರಾಜದಾಸಿಯು ರಾಜನಿಗೆ ಬೇಕಿದ್ದವಳ ಜತೆಗೆ ಮೊದಲಿಗೆ ಭೆಟ್ಟಿಯಾಗಿದ್ದು, ಆ ಆಟಗಳಲ್ಲಿ ಸೇರಿ ಅವಳಕೂಡ ಮಾತುಕತೆಗಳನ್ನಾಡುತ್ತಾಳೆ. ಅವಳಿಗೆ ಅಂದ-ಚಂದದ ವಸ್ತುಗಳನ್ನು ನೋಡಲಿಕ್ಕೆ ಕಳಿಸುತ್ತಾಳೆ. ಒಂದು ನೋಡಿದನಂತರ ಇನ್ನೊಂದನ್ನು ನೋಡಲು ಕರೆಯುತ್ತಾಳೆ. ಹೀಗೆ ತೋರಿಸುತ್ತಿರುವಾಗ ಏಕಾಂತದಲ್ಲಿ, ಅವಳ ಮೇಲೆ ಇದ್ದ ರಾಜನ ಪ್ರೇಮವನ್ನು ಹೇಳುತ್ತಾಳೆ. ಅದರಂತೆ ಸಮಾಗಮದಲ್ಲಿದ್ದ ಅವನ ಚಾತುರ್ಯವನ್ನೂ ಅರವತ್ತುನಾಲ್ಕು ಕಲೆಗಳಲ್ಲಿ ಅವನಿಗಿದ್ದ ಪ್ರವೀಣತೆಯನ್ನೂ ಹೇಳುತ್ತಾಳೆ. ಇದರ ನಂತರ ಅವಳು ರಾಜನಿಂದ ಸಮಾಗಮಿಸಲ್ಪಟ್ಟರೆ, ಈ ಸುದ್ದಿಯನ್ನು ಯಾರಿಗೂ ತಿಳಿಸಕೂಡದೆಂದು ಹೇಳಿ ಕಳಿಸಿಕೊಡುತ್ತಾಳೆ.

ಇಂದರಂತೆ ವಶಳಾಗದಿದ್ದವಳನ್ನು ರಾಜನು ತಾನೇ ಉಪಚಾರಗಳಿಂದ ಶಾಂತಳನ್ನಾಗಿ ಮಾಡಿ ನಂತರ ಅನುರುಕ್ತಳನ್ನಾಗಿಸಿ ಸಿಕ್ಕಕೂಡಲೇ ಪ್ರೇಮಪೂರಿತವಾಗಿಯೇ ಅವಳಿಗೆ ಬೇಳ್ಕೊಡುತ್ತಾನೆ. ಅವಳ ಗಂಡನಿಗೆ ಏನಾದರೂ ಕೆಲಸವನ್ನು ಹಚ್ಚಿಕೊಡುತ್ತಾನೆ.

ಅಂತಃಪುರಗಳಲ್ಲಿನ ಚತುರ ರಾಣಿಯರು ಸೇವಿಕೆಯರನ್ನು ಕಳಿಸಿ ರಾಜನಿಗೆ ಬೇಕಿದ್ದವಳನ್ನು ತರಿಸುತ್ತಾರೆ. ಪರಸ್ಪರ ಪ್ರೇಮ ಹೆಚ್ಚಿದಂತೆ ಏನೋ ನೆವದಿಂದ ಭೆಟ್ಟಿಗೂ ಕಳಿಸುತ್ತಾರೆ. ಬಂದನಂತರ ಸತ್ಕಾರವಾದ ಕೂಡಲೇ ಕುಡಿಸಿ ಅಮಲೇರಿಸುತ್ತಾರೆ. ಆಮೇಲೆ ರಾಜದಾಸಿಯು ಬಂದು ಈ ಮೊದಲು ಹೇಳಿದಂತೆ ಮಾಡುತ್ತಾಳೆ.

ರಾಜನಿಗೆ ಬೇಕಿದ್ದವಳು ಯಾವದಾದರೂ ಕಲೆ-ಕೈಗಾರಿಕೆಗಳಲ್ಲಿ ನಿಷ್ಣಾತಳಿದ್ದರೆ ಅದನ್ನು ಅವಳಿಗೆ ತೋರಿಸುವ ನೆವದಿಂದ ಅಂತಃಪುರ

ವಾಸಿಸಿಯರು ಉಪಚಾರಪೂರಿತವಾಗಿ ಅವಳನ್ನು ಕರೆಕಳಿಸುತ್ತಾರೆ. ಬರುತ್ತಲೇ ಈ ಮೊದಲು ಹೇಳಿದಂತೆ ರಾಜದಾಸಿಯು ಅವಳನ್ನು ರಾಜನ ಜತೆಗೆ ಕೂಡಿಸುತ್ತಾಳೆ. ಇದರಂತೆ ಪತಿಯಿಂದ ಪೀಡಿತರೂ ಸ್ವಾರ್ಥಿ ಜನರ ಸ್ತ್ರೀಯರೂ ಆಯಾ ಕಷ್ಟನಿವಾರಣೆಯ ಆಶ್ವಾಸನೆಗಳಿಂದ ರಾಜ ದೂತಿಯರಿಂದ ರಾಜರವಶರಾಗುತ್ತಾರೆ. ಇದೇ ಪ್ರಕಾರ ನವಕರಿ ಬೇಡಿದ್ದವರು, ಪ್ರಧಾನಿ, ಸೇನಾಪತಿ, ರಾಜಾಧಿಕಾರಿಗಳಿಂದ ವೈರಶ್ಯ ಕಟ್ಟಿಕೊಂಡವರು, ಬಲವಂತರಕೂಡ ಜಗಳಾಡಿದವರು, ವ್ಯಾಪಾರದಲ್ಲಿ ದುರ್ಬಲರು, ತಮ್ಮ ಘನಗಳಿಂದ ಅತೃಪ್ತರು, ರಾಜಪ್ರೇಮವನ್ನು ಬಯಸುವವರು, ರಾಜ್ಯದ ಜನರಲ್ಲಿ ಪ್ರಸಿದ್ಧಿಯನ್ನು ಬಯಸುವವರು, ಸ್ವಜಾತೀಯರಿಂದ ಪೀಡಿಸಲ್ಪಟ್ಟವರು, ಬಂಧು ವರ್ಗದವರನ್ನು ಪೀಡಿಸಬೇಕೆಂಬುವ ಇಚ್ಛೆಯುಳ್ಳವರು, ನಿಂದಕರು ಮತ್ತು ಅನ್ಯಕಾರ್ಯಗಳಲ್ಲಿ ಪರವಶರಾದ ಜನರ ಸ್ತ್ರೀಯರೂ ಇದರಂತೆ ವಶರಾಗುತ್ತಾರೆ.

ಇದರಂತೆ ವಶರಾಗಿದ್ದರೆ, ಬೇರೆಯವರ ಕೂಡ ಸಂಸರ್ಗ ಮಾಡುತ್ತಿದ್ದುದನ್ನು ವಾಳತಿ ಇಟ್ಟು, ನೋಡಿದ ನಂತರ ಕ್ರಮವಾಗಿ ತನ್ನಲ್ಲಿ ತಂದು ಇಟ್ಟು, ದಾಸಿಯನ್ನಾಗಿ ಮಾಡಿ, ಕ್ರಮಶಃ ಅಂತಃಪುರದಲ್ಲಿ ಇಟ್ಟುಕೊಳ್ಳುತ್ತಾರೆ. ಗೂಢಚಾರರ ಮುಖಾಂತರ ಅವಳ ಪತಿಯನ್ನು ರಾಜದ್ರೋಹಿಯೆಂದು ಸಿದ್ಧ ಮಾಡಿ, ಅವನ ಮುಂದಿನ ಜೀವನವನ್ನು ನಾಶ ಮಾಡಿ, ಅದರಿಂದ ಅವನ ಸ್ತ್ರೀಯನ್ನು ಉಳಿಸುವ ನೆಪದಿಂದ ಅವಳನ್ನು ಅಂತಃಪುರದಲ್ಲಿ ಇಟ್ಟುಕೊಳ್ಳುತ್ತಾರೆ. ಇದು ಗೌಪ್ಯ ಪ್ರಯೋಗವಿದೆ. ಬಹುತರವಾಗಿ ಇದು ರಾಜಪುತ್ರರಿಂದ ಪ್ರಯೋಗಿಸಲ್ಪಡುತ್ತದೆ. ಇಂತಹ ಪ್ರಯೋಗಗಳು ಒಪ್ಪಿಗೆಯಿಂದಲೋ ಅಥವಾ ಬಲಾತ್ಕಾರದಿಂದಲೋ ಸದ್ಯ ಯುಗದಲ್ಲಿಯೂ ನಡೆದಿವೆ-ನಡೆಯುತ್ತವೆ. ಎಂಬುದು ಸರ್ವಶ್ರುತವಿದೆ. ಅನು )

ಪರರ ಮನೆಯಲ್ಲಿ ಒಳಹೋಗುವದರಿಂದ ಗುಪ್ತಯೋಗಗಳಾಗಬಹುದೆಂಬುವ ಶಂಕೆ ಇಲ್ಲಿ ಬರುತ್ತದೆ. ಆಗ ದೂತಿಯರಿಂದ ಸಾಧ್ಯಾಸಾಧ್ಯತೆಗಳ ಸಂಕೇತಗಳನ್ನು ಮಾಡಿಸಿಯೇ ಒಳಹೋಗುತ್ತಾರೆ. ಆಗ ಮತ್ತು ಈ ಸಮಯಗಳಲ್ಲಿ ದೊಡ್ಡವರ ಚರಿತ್ರ್ಯಯನ್ನೂ ಕೂಡ ಯಾದೂ

ನೋಡುವದಿಲ್ಲ. ಮತ್ತು ಗುಪ್ತತೆಯಿರುವದರಿಂದ ಅನ್ಯರ ಅನುಕರಣೆಯನ್ನೂ ಮಾಡುವದಿಲ್ಲ. ಇದಕ್ಕೆ ಉತ್ತರವನ್ನು—ಇದಕ್ಕೆ ವಿರುದ್ಧವಾದ ಉತ್ತರವನ್ನು, ಈ ಕೆಳಗಿನಂತೆ ಕೊಡುತ್ತಾರೆ:—

ಇದರಂತೆ ಇದ್ದರೂ ಕೂಡ ರಾಜನು ಅನ್ಯರ ಮನೆಯಲ್ಲಿ ಒಳ ಸೇರ ಬಾರದು. ರಾಜನು ಗುಪ್ತವಾಗಿಯೂ ಕೂಡ ಎಂದೆಂದಿಗೂ ವ್ಯಭಿಚಾರ ಮಾಡಬಾರದು. ಏಕೆಂದರೆ, ಕೋಟ್ಟಾ ಸಂಸ್ಥಾನದ ರಾಜನು ಅಗಸನಿಂದ ಮತ್ತು ಜಯಸೇನನು ಕುದುರೆಲಾಯದವನಿಂದ ಕೊಲ್ಲಲ್ಪಟ್ಟರು.

ಅನ್ಯರ ಮನೆಯಲ್ಲಿ ಹೋಗುವದರಿಂದ ಆದ ಕೆಲವೊಂದು ಪ್ರಸಿದ್ಧ ದೋಷಗಳಿವೆ. ಅವನ್ನು ಇಲ್ಲಿ ಹೇಳುತ್ತಾರೆ.

ಗುಜರಾತದಲ್ಲಿ ಕೋಟ್ಟಾ ಎಂಬ ಸಂಸ್ಥಾನವಿದೆ (ಅದು ಈಗಲೂ ಇದೆ). ಅಲ್ಲಿನ ಅಭೀರನೆಂಬ ರಾಜನು ವಸುಮಿತ್ರನೆಂಬ ವ್ಯಾಪಾರಿಯ ಹೆಂಡತಿಯು ಕೂಡ ಸಮಾಗಮಿಸಲು ಅವನ ಮನೆಗೆ ಹೋದಾಗ, ವ್ಯಾಪಾರಿಯು ತನ್ನಿಂದ ನಿಯೋಜಿತನಾದ ಅಗಸನೊಬ್ಬನು ಅಭೀರಸೇನನನ್ನು ಅಲ್ಲಿಯೇ ಕೊಂದನು. ಇದರಂತೆ ಮತ್ತೊಬ್ಬ ಜಯಸೇನನೆಂಬ ಅರಸನೂ ಕೊಲ್ಲಲ್ಪಟ್ಟನು.

**ಅರಸುಮನೆತನದವರ ಬಹಿರಂಗ ಕಾಮುಕೇಳಿಗಳು:** ಬಹಿರಂಗ ಸೌಂದರ್ಯೋಪಾಸನೆಗಳು (ಕಾಮುಕೇಳಿಗಳು) ದೇಶಾಚಾರಾನುಸಾರವಾಗಿ ನಡೆಯುತ್ತವೆ. ಪೂರ್ವಕಾಲದಲ್ಲಿ ಯಾವ ದೇಶದಲ್ಲಿ ಯಾವ ರೀತಿ ಇದೆಯೋ ಆ ರೀತಿಗನುಸಾರವಾಗಿ ಮಹಾನ್ ಜನರು ನೋಡುತ್ತಿರುವಂತೆಯೂ ರಾಜನು ಕಾಮುಕೇಳಿಯನ್ನು ಮಾಡುತ್ತಾನೆ. ಆದರೆ ಅವನ ಅನುಕರಣೆಯನ್ನೂ ಕೂಡ ಯಾರೂ ಮಾಡುವದಿಲ್ಲ. ಏಕೆಂದರೆ ಆ ಕೃತಿಗಳು ರಾಜನಿಗಾಗಿಯೇ ಮೀಸಲಾದದ್ದಿವೆ.

**ಆಂಧ್ರದೇಶದ ರೀತಿ:** ಆಂಧ್ರದೇಶದ ಜನರು ತಮ್ಮ ಮಗಳ ಲಗ್ನವಾದ ಹತ್ತನೆಯ ದಿನ ರಾಜನ ಭೆಟ್ಟಿಗೆಂದು ಕಾಣಿಕೆಗಳನ್ನು ಕೊಟ್ಟು ಅವಳನ್ನು ರಾಜನಲ್ಲಿಗೆ ಕಳಿಸುತ್ತಾರೆ. ಆಗ ರಾಜನು ಅವಳನ್ನು ಸಮಾಗಮಿಸಿ ಕಳಿಸಿಕೊಡುತ್ತಾನೆ.

**ವಾತ್ಸಗುಲ್ಮಕದ ರೀತಿ:** ಇವರಿಗೂ ರಾಜನೇ ಪ್ರಾಧಾನ್ಯನಿದ್ದಾನೆ, ಅದಕ್ಕಾಗಿ ತಮ್ಮ ಅಂತಃಪುರದ ಸ್ತ್ರೀಯರನ್ನು ರಾತ್ರಿಗೆ ರಾಜನ ಸೇವೆ

ಸ್ವಾಮಿಯಿದ್ದಾನೆ, ಅಂದಮೇಲೆ ಎಲ್ಲರನ್ನೂ ಹೇಗೆ ತಾನೇ ತೃಪ್ತಿಸಬಲ್ಲನು? ಅವರು ಪರಸ್ಪರ ಪ್ರಯೋಗಗಳಿಂದ ತೃಪ್ತರಾಗುತ್ತಾರೆ. ಅಂದರೆ, ಒಬ್ಬಳು ಇನ್ನೊಬ್ಬಳಲ್ಲಿ ರತಿಸಂಗಮಾಡಿದರೆ ಆ ಇನ್ನೊಬ್ಬಳು ಅವಳಲ್ಲಿ ರತಳಾಗುತ್ತಾಳೆ. (Homo-sexuality).

ದಾಸಿಯ ಪುತ್ರಿ, ಸಖೀ ಇಲ್ಲವೆ ದಾಸಿ ಇವರನ್ನು ಪುರುಷರಂತೆ ಸಿಂಗರಿಸಿ ಕಂದ-ಮೂಲ-ಫಲ ಮುಂತಾದ ಅಪದ್ರವ್ಯಗಳಿಂದ ತಮ್ಮ ಅಭಿಪ್ರಾಯಗಳನ್ನು ನಿವೃತ್ತಮಾಡುತ್ತಾರೆ. ಅವರಲ್ಲಿ ಪುರುಷ ಬುದ್ಧಿಯನ್ನು ಮಾಡಿಕೊಳ್ಳುವದರಿಂದ ಭಾವನಾವಿವ್ಹಲತೆಯಿಂದ ಅತ್ಯಂತ ತೃಪ್ತಿಸಿಕ್ಕುತ್ತದೆ. ಉದ್ರಿಕ್ತವಾದ ಪುರುಷದಂಗದಂತೆ ಆಕೃತಿಯುಳ್ಳ ಈ ಅಪದ್ರವ್ಯಗಳನ್ನು ಅವರು ಹುಡುಕಿ ತರಿಸುತ್ತಾರೆ. ಈ ಅವಯವಗಳ ಗ್ರಹಣದಿಂದ ರಾಗ ಮತ್ತು ಭಾವಗಳ ಶಾಂತಿಯಾಗುತ್ತದೆ. ಇದು ಕೇವಲ ಕಾಮ ಶೃದ್ಧೆಯ ವಿನೋದವಿದೆ. ಇದು ಅಪ್ರಾಧಾನ್ಯತೆಯಾಗಲು ಕಾರಣವೇನೆಂದರೆ, ಇದಕ್ಕೆ ಕಾಮವೆಂದೆನ್ನಲು ಬರುವಂತಿಲ್ಲ. ಗಡ್ಡ-ಮೀಸೆಗಳಿಲ್ಲದ ಪುರುಷ ಪ್ರತಿಮೆಯ ಜತೆಗೆ ಮಲಗುತ್ತಾರೆ.

ಕೃಪಾಶೀಲರಾದ ರಾಜರು ಸಮಾಗಮಿಸುವ ಇಚ್ಛೆಯಿಲ್ಲದಿದ್ದರೆ ನಡುವಿಗೆ ಕೃತ್ರಿಮಲಿಂಗವನ್ನು ಕಟ್ಟಿಕೊಂಡು ತೃಪ್ತಿ ಸಿಕ್ಕುವತನಕವೂ ಅನೇಕಾನೇಕ ಸ್ತ್ರೀಯರಕೂಡ ಸಮಾಗಮಿಸುತ್ತಾರೆ. ಆದರೆ, ಯಾವಳ ಮುಟ್ಟು ಮುಂತಾದದ್ದು ಆಗಿದೆಯೋ ಅವಳ ಕೂಡ ಕೃತ್ರಿಮ ಲಿಂಗವನ್ನು ಕಟ್ಟಿಕೊಳ್ಳದೇ ಭಾವಪೂರ್ಣರಾಗಿ ಸಮಾಗಮಿಸುತ್ತಾರೆ. ಇದು ಪ್ರಾಚ್ಯದಲ್ಲಿನ ದಯಾಳು ರಾಜರ ವ್ಯವಹಾರವಿದೆ. ಇದನ್ನು ಅಂತಃಪುರ ವಿಷಯದಲ್ಲಿನ ಯೋಗವೆಂದು ಕರೆಯುತ್ತಾರೆ.

ಇದರಂತೆ, ಸ್ತ್ರೀಸಹವಾಸ ಸಿಕ್ಕದಿದ್ದ ಪುರುಷರೂ ಕೂಡ ಮುಷ್ಟಿಮೈಥುನ, ಗುಧಮೈಥುನ, ಆಡು-ಕುರಿ-ಕುದುರೆ ಮುಂತಾದ ಪಶುಗಳಲ್ಲಿ ಮತ್ತು ಸ್ತ್ರೀಯರ ಎಲ್ಲ ಅವಯವಗಳಿರುವ ಪ್ರತಿಮೆಗಳಲ್ಲಿ ಹಾಗೂ ಸಿಂಹಾಕ್ರಾಂತವೆಂಬ ಆಸನ ಪ್ರಯೋಗದಿಂದ ಕಾಮತೃಪ್ತಿಯನ್ನು ತಂದುಕೊಳ್ಳುತ್ತಾರೆ. ಸಿಂಹಾಕ್ರಾಂತವೆಂದರೆ:— ಭೂಮಿಯಮೇಲೆ ಎರಡೂ ಕೈಗಳನ್ನು ಊರಿ ಅವುಗಳ ಮೇಲೆ ಇಡೀ ಶರೀರದ ಭಾರವನ್ನು ಹಾಕಿ ಕಪ್ಪೆಯಂತೆ

ಕೂಡುವುದು. ಲಿಂಗವನ್ನು ಎರಡೂ ಬಾಹುಗಳ ಮಧ್ಯದಲ್ಲಿ ತಂದು ಘರ್ಷಿಸುವದು. ಸಿಂಹಾಕ್ರಾಂತದಲ್ಲಿ ಈ ವಿಧಿಯಾಗುತ್ತದೆ. ಯಾವ ಸ್ಥಳದಲ್ಲಿ ವೀರ್ಯಪಾತಮಾಡುವಂತಿಲ್ಲವೋ ಆ ಸ್ಥಳದಲ್ಲಿ ವೀರ್ಯಪಾತ ಮಾಡಿದರೆ ಮಹಾಪಾಪವಿದ್ದರೂ ಕೂಡ ಇದನ್ನೇಕೆ ಇಲ್ಲಿ ಹೇಳಲಾಗುತ್ತದೆ? ಎಂಬುವ ಶಂಕೆಗೆ ಅಲ್ಲಿ ಪ್ರಾಯಶ್ಚಿತ್ತದ ವಿಧಾನವನ್ನು ಮಾಡಿಯಾಯಿತು ಇಲ್ಲಿಯೂ ಕೂಡ ಪ್ರಾಯಶ್ಚಿತ್ತ ಮತ್ತು ವಿಧಾನ ಇವೆರಡನ್ನೂ ಹೇಳಿಯಾಯಿತು ಎಂದು ಉತ್ತರ ಕೊಡುತ್ತಾರೆ.

ಇನ್ನು ಹೊರಗಿನ ವಿಷಯಗಳನ್ನು ತೋರಿಸುತ್ತಾರೆ: ಅಂತಃಪುರದಲ್ಲಿ ಹೊರಗಿನ ಪುರುಷರು ಹೇಗೆ ಪ್ರವೇಶ ದೊರಕಿಸುತ್ತಾರೆ?

ರಾತ್ರಿಯಲ್ಲಿ ರಾಣಿಯರ ಸೇವೆಗೆಂದು ಹೋಗುವ ದಾಸಿಯರು ಯಾವನಾದರೊಬ್ಬ ಪುರುಷನನ್ನು ಸ್ತ್ರೀವೇಷದಿಂದ ಕರೆದೊಯ್ಯುತ್ತಾರೆ. ಅವರನ್ನು ಇದಕ್ಕೆ ತಯಾರಿಮಾಡಲು ರಾಣಿಯರ ಅಂತರಂಗವನ್ನು ಪೂರ್ಣವಾಗಿ ಬಲ್ಲ ಸ್ತ್ರೀಯರೇ ಇರಬೇಕು; ಮತ್ತು ಅವರು ಅದರಿಂದಾಗುವ ಲಾಭಗಳನ್ನೂ ಹೇಳಬೇಕು. ಇಲ್ಲವೆ, ಅಂತಃಪುರದಲ್ಲಿ ನಿರಾಯಾಸವಾಗಿ ಒಳಸೇರುವದು ಮತ್ತು ಹೊರಬರುವ ವಿಧಾನ, ಮಹಲಿನ ವಿಶಾಲತೆ ಅದರಂತೆ ಪಹರೆಯವರ ತಪ್ಪು-ತಡೆಗಳು ಮತ್ತು ರಾಜ ಹಾಗೂ ರಾಜಕುಮಾರ ಇವರು ಯಾವಾಗಲೂ ಹತ್ತಿರ ಇರುವದಿಲ್ಲವೆಂಬುದನ್ನೂ ಹೇಳಬೇಕು. ಆದರೆ, ಹೋಗಿ ಬರುವ ಧೈರ್ಯವಾಗಲೀ ಹೇತುವಾಗಲೀ ಇದ್ದಿರದಿದ್ದರೆ, ಪುರುಷನನ್ನು ಮಹಲಿನ ಸಮೀಪಕ್ಕೂ ಕೂಡ ಹೋಗದಂತೆ ಎಚ್ಚರಿಸಿರಬೇಕು. ಏಕೆಂದರೆ ಮಾರ್ಗದ ಇಲ್ಲವೆ ವ್ಯಭಿಚಾರದ ಭಾವವು ಯಾರಲ್ಲಿ ಇಲ್ಲವೋ ಅಂಥವನನ್ನು ಜಾರಕರ್ಮಕ್ಕೆಳಿಸುವದರಲ್ಲಿ ದೋಷವಿದೆ. ಅದರಿಂದ ಅವನ ಕೆಡಕೂ ಆಗಬಹುದು.

ಇದರ ವಿಷಯಕ್ಕೆ ವಾತ್ಸ್ಯಾಯನನ ನಿಷೇಧ:—

ಅಂತಃಪುರದಲ್ಲಿ ಹೋಗಬೇಕೆಂದು ಇಚ್ಛೆಯಿದ್ದವರನ್ನು ಇಟ್ಟುಕೊಂಡು ಮುಂದಿನಂತೆ ಹೇಳುತ್ತಾರೆ:—

ನಾಗರಿಕನಿಗೆ ಅಂತಃಪುರ ಪ್ರವೇಶವು ನಿರಾಯಾಸದ್ದಿದೆಯೆಂದು ಅನಿಸಿದರೂ ಕೂಡ ಅವನು ಒಳಹೋಗಬಾರದು. ಏಕೆಂದರೆ ಅದರಲ್ಲಿ

ಹೆಚ್ಚಾಗಿ ಹಾನಿಯಾಗುವ ಸಂಭವವಿದೆ. ಅಲ್ಲದೆ, ರಾಜನ ಪರಿವಾರ ವೆಂದರೆ ಚಾತುರ್ವರ್ಣದವರಿಗೂ ಮತ್ತು ಚತುರಾಶ್ರಮದವರಿಗೂ ಗುರು ವಿನ ಪರಿವಾರದಂತಿರುತ್ತದೆ. ಅಂದಮೇಲೆ ರಾಜಪತ್ನಿಯು ಗುರುಪತ್ನಿ ಯಂತೆ ತ್ಯಾಜ್ಯಳಿದ್ದಾಳೆ. ಈ ಮಾತು ಅಂತಃಪುರ ಪ್ರವೇಶವು ಸುಪ್ರಾಪ್ಯ ವೆಂದೆನಿಸಿದಾಗ ಲಕ್ಷ್ಯದಲ್ಲಿಡತಕ್ಕಂಥದ್ದಿದೆ. ಇಷ್ಟೇ ಅಲ್ಲದೆ ಇನ್ನೂ ಅನೇ ಕಾನೇಕ ಹಾನಿಗಳಾಗುತ್ತವೆ. ಅಂತಃಪುರದಲ್ಲಿ ಪ್ರವೇಶಿಸುವ ಮತ್ತು ಆ ಪ್ರಕಾರದ ಚೇಷ್ಟೆಗಳನ್ನು ಮಾಡುತ್ತಿರುವದು ಎಂದಾದರೂ ಬಯಲಿಗೆ ಬಿದ್ದರೆ, ನೇರವಾಗಿ ಜೀವಕ್ಕೆ ನೀರನ್ನು ಬಿಡಬೇಕಾಗುತ್ತದೆ. ಇಂದಿನ ವರೆಗಿನ ಇತಿಹಾಸವನ್ನು ನೋಡಿದರೆ, ಇಂತಹ ವಿಷಯಗಳ ಬಗ್ಗೆ ಸಿಕ್ಕು ಬಿದ್ದ ಮತ್ತು ಇಂತಹ ವಿಷಯಗಳ ಬಗ್ಗೆ ಸಂದೇಹಮಾತ್ರವಿದ್ದ ಪುರು ಷರು ಯಾವಜ್ಜೀವನ ಸೆರೆಮನೆಯಲ್ಲಿ ಒದ್ದಾಡಿ ಮರಣಹೊಂದಿದ್ದಾರೆ. ಯಾರಿಗೆ ಮರಣದ ಭಯವಿಲ್ಲವೋ ಮತ್ತು ಯಾರಿಗೆ ಪ್ರಾರಬ್ಧಕರ್ಮಾನು ಸಾರವಾಗಿ ಈ ಕಡೆಗೆ ಮನಸ್ಸು ಒಲಿದಿರುತ್ತದೆಯೋ ಅಂಥವರು ಸಾಯ- ಣನು ಹೇಳಿದಂತೆ "ಯಾರ ದೈವದಲ್ಲಿ ಒಳಿತು ಕೇಡುಗಳಾಗುವ ನಿಶ್ಚಿತವೇ ಇದೆಯೋ ಅಂಥವರು ಅರಮನೆಯತ್ತ ಕೆಟ್ಟ ದೃಷ್ಟಿಯನ್ನು ಚೆಲ್ಲುತ್ತಾರೆ." ಇದಕ್ಕಿಂತಲೂ ಬೇರೆ ತರಹದ ಚೇಷ್ಟೆಗಳು ಸರಿಜೋಡಿಯ ರಾಜಕುಮಾರ ರಿಂದ ಆಗುತ್ತವೆ. ನಮ್ಮ ತಿಳುವಳಿಕೆಯ ಮಟ್ಟಿಗೆ ಇವು ಪ್ರಜಾವರ್ಗ ದವರಲ್ಲಿ ಕ್ವಚಿತ್ತಾಗಿ ಆಗುತ್ತವೆ. ಈ ಉಪಾಯಗಳನ್ನು ಆ ರಾಜಕುಮಾ ರರು, ಯಾವಳ ಸೌಂದರ್ಯದ ವಿಷಯಕ್ಕೆ ಮುಗ್ಧರಾಗಿದ್ದಾರೋ ಅವ ಳಲ್ಲಿ ಪ್ರಯೋಗಮಾಡುತ್ತಾರಲ್ಲದೆ, ಅವಳನ್ನು ಇಟ್ಟುಕೊಳ್ಳಲೂ ಕೂಡ ಸಿದ್ಧರಿರುತ್ತಾರೆ. ಅವರು 'ಏನಕೇನ ಪ್ರಕಾರೇಣ' ಅಂತಃಪುರಗಳಲ್ಲಿ ಪ್ರವೇಶಿಸುತ್ತಾರೆ ಆದರೆ, ಎಂದಾದರೊಂದು ದಿನ ಯಾರ ಕೈಯಲ್ಲಾದರೂ ಸಿಕ್ಕರೆ ತಮ್ಮ ಜೀವವನ್ನು ಕೂಡ ಆಟಿಗೆಯೆಂದು ತಿಳಿಯುತ್ತಾರೆ. ಈ ಲೀಲೆಗಳನ್ನು ಎಷ್ಟು ವರ್ಣಿಸಿದರೂ ಸಾಲದು. ಭೋಜರಾಜನಂಥ ವೀರಾಧಿವೀರನಿಗೂ ಕೂಡ ಶಿಕ್ಷನ ವೇಷದಿಂದ ತನ್ನ ಕಾರ್ಯ ಸಾಧಿಸಿ ಕೊಳ್ಳಬೇಕಾಯಿತು. ಆದಕ್ಕಾಗಿ ಇವು ಅಂಥವರಿಗಾಗಿಯೇ ಇವೆ ಹೊರತು ಪ್ರಜಾಜನರಿಗಲ್ಲ. ಕಾರಣ, ಸಾಮಾನ್ಯ ಯುವಕರಿಗೆ ಇದು ತರವಲ್ಲವೆಂದು ವಾತ್ಸ್ಯಾಯನನ ಮತ.

ಅಂತಃಪುರ ಪ್ರವೇಶದ ಮುನ್ನ ಲಕ್ಷ್ಯದಲ್ಲಿಟ್ಟುಕೊಳ್ಳಬೇಕಾದ ಸಂಗತಿ: ಹುಡುಕಿದರೂ ಸಿಕ್ಕಬಾರದಂಥ ಸುತ್ತಲೂ ಗೊಂಡಾರಣ್ಯವುಳ್ಳ ಉಪವನ, ಅದರ ಅಂಚಿಕೆ ದೊಡ್ಡ ದೊಡ್ಡ ರೆಂಬೆಗಳುಳ್ಳ ವಿಶಾಲ ಮರಗಳು, ತುಸು ಅಸಾವಧತೆಯಿಂದಿದ್ದ ರಕ್ಷಕರು, ರಾಜನು ಹೊರಗೆ ಹೋದಾಗ, ಇಂತಹ ಸಮಯಗಳಲ್ಲಿಯೇ ಅಂತಃಪುರ ಪ್ರವೇಶದ ವಿಚಾರವನ್ನು ಮನಸ್ಸಿನಲ್ಲಿ ತರಬೇಕಲ್ಲದೆ ಇದರಂತೆ ಸಕಲ ಯೋಗಗಳಿದ್ದಾಗ ಬಹಳ ಸಲ ಕರೆಬಂದ ನಂತರ ಅವರಿಂದ ತೋರಿಸಲ್ಪಟ್ಟ ಮಾರ್ಗದಿಂದ ದ್ರವ್ಯಪ್ರಾಪ್ತಿಗಾಗಿ ಅಂತಃಪುರ ಪ್ರವೇಶಮಾಡಬೇಕು.

ಅಂತಃಪುರದಿಂದ ನಿರಾತಂಕವಾಗಿ ಬರಬಹುದಾದರೆ ದಿನವಹಿ ಹೋಗಿಬರಬೇಕು.

ಯಾರಿಗೆ ಸ್ವತಂತ್ರವಾಗಿ ಅಂತಃಪುರ ಪ್ರವೇಶಮಾಡಬೇಕಾಗಿದೆಯೊ ಅವರು ಹೇಗೆ ಪ್ರವೇಶಮಾಡಬೇಕು? ಎಂಬುವ ಸಂಗತಿಯನ್ನು ತೋರಿಸುವದಕ್ಕಾಗಿ ಅವುಗಳಲ್ಲಿನ ಪ್ರಕಾರಗಳನ್ನು ಕೆಳಗಿನಂತೆ ಹೇಳುತ್ತಾರೆ:—

ಹೊರಗಿನ ರಕ್ಷಕರ ಕೂಡ ಏನೋ ಕೆಲಸದ ನೆವದಿಂದ ಗುರುತು ಮಾಡಿಕೊಳ್ಳಬೇಕು. ಇಲ್ಲವೆ, ಆಪ್ತತ್ವದ ಸಂಬಂಧವನ್ನಾದರೂ ಕಲ್ಪಿಸಿಕೊಳ್ಳಬೇಕು. ಅಂತಃಪುರದಲ್ಲಿ ಕೆಲಸಕ್ಕಿದ್ದ ದಾಸಿಯ ಮೇಲೆ ಅತ್ಯಂತಿಕವಾದ ಆಸಕ್ತಿಯನ್ನು ತೋರಿಸಿ, ಅವಳು ಒಂದು ದಿನ ಭೆಟ್ಟಿಯಾಗದಿದ್ದರೆ ಬಹಳೇ ಆಲಾಪ-ಪ್ರಕೋಪಗಳನ್ನು ಮಾಡಿ, ಅವಳಲ್ಲಿ ತಾನು ಅನುರುಕ್ತನಾಗಿದ್ದೇನೆಂದು ಬಿಂಬಿಸಿಕೊಟ್ಟನಂತರ; ಅವಳಿಂದ ಈ ಹಿಂದೆ ವರ್ಣಿಸಲಾದ ಎಲ್ಲ ತರದ ದೂತಿಕಾರ್ಯಗಳನ್ನು ಮಾಡಿಸಿಕೊಳ್ಳಬೇಕು. ಆತ್ಮರಕ್ಷಣೆಗಾಗಿ ರಾಜನ ಗುಪ್ತಚರರನ್ನು ಯಾವದೇ ಪ್ರಕಾರದಿಂದ ಅಂಕಿತದಲ್ಲಿಟ್ಟುಕೊಳ್ಳಬೇಕು. ದೂತಿಯರ ಕೈಯಿಂದ ಸಾಧ್ಯವಾಗದಿದ್ದರೆ ಯಾವಳು ತನ್ನ ಸಂಜ್ಞೆಗಳಿಗೆ ಸ್ವೀಕಾರಸೂಚಕವಾದ ಮಾರುತ್ತರಗಳನ್ನು ಕೊಟ್ಟಿರುತ್ತಾಳೋ ಅಂಥವಳು ದೂರದಲ್ಲಿ ನಿಂತುಕೊಂಡು ನೋಡಿದರೂ ಕಂಣಿಗೆ ಕಾಣಿಸುತ್ತಾಳೋ ಅಂಥ ಸ್ಥಳದಲ್ಲಿ ನಿಲ್ಲಬೇಕು. ದೃಷ್ಟಿಮಿಲನವಾಗದಿದ್ದರೆ ದರ್ಶನಯೋಗವಿದ್ದಾಗಲೂ ನಿಂತುಕೊಳ್ಳುವದು ವ್ಯರ್ಥವಿದೆ. ಅಂಥಲ್ಲಿ ನಿಂತುಕೊಂಡು ಸಿಕ್ಕ-ಸಿಕ್ಕ ಅಂತಃಪುರ ರಕ್ಷಕರ ಮತ್ತು ಅವಳ

ಪುರುಷನು ಸ್ವಸ್ತ್ರೀಯರ ವಿಷಯಕ್ಕೆ ಎಂದಿಗೂ ಮೋಸ ಹೋಗುವದಿಲ್ಲ. ಈ ಅಧಿಕರಣವನ್ನು ಹೇಳುವ ಮುಖ್ಯೋದ್ದೇಶವಾದರೂ ಪರಸ್ತ್ರೀಗಮನದ ಪರಿಹಾರ್ಯತೆಯನ್ನು ತೋರಿಸಿ ಅದೇ ಮಾರ್ಗದಿಂದ ಅದನ್ನು ಅಪರಿಹಾರ್ಯವನ್ನಾಗಿ ಮಾಡಬೇಕೆಂಬುದೇ ಇದೆ.

ಪರಸ್ತ್ರೀಗಮನದಲ್ಲಿ ಹೇಳಿದ ಪ್ರಯೋಗಗಳು ಪಾಕ್ಷಿಕವಿವೆ. ಪರಸ್ತ್ರೀ ವಿಷಯಕ್ಕಾಗಿ ಜನ ಸಾಯುತ್ತಿರುವದನ್ನು ನೋಡುತ್ತೇವೆ. ಅದರಲ್ಲಿ ಧರ್ಮ ಮತ್ತು ಧನದ ನಷ್ಟವಿದೆ. ಅದಕ್ಕಾಗಿ ಪರಸ್ತ್ರೀಗಮನದ ವ್ಯಸನದಿಂದ ಯಾವಾಗಲೂ ಅಲಿಪ್ತರಾಗಿರಬೇಕು.

## ಉಪಸಂಹಾರ.

ಈ ಹಿಂದಿನ ಎರಡೂ ಪ್ರಕರಣಗಳ ಉಪಯೋಗವು ಪ್ರಾಚೀನ ಸಾಹಿತ್ಯದಲ್ಲಿ ಸಮಾನತೆಯಿಂದ ಆದದ್ದಿದೆ. ರಾವಣ ಮುಂತಾದವರ ರಾಜಸತ್ತೆಯ ಮದದಿಂದ ಮಾಡಿದ ಅತ್ಯಾಚಾರಗಳು "ರಾಜರ ಕಾಮಕೇಳಿಗಳ ಉಗ್ರರೂಪ"ವೆಂದೇ ತಿಳಿಯಲಾಗುತ್ತದೆ. ಅತ್ಯಾಚಾರಿಗಳಾದ ಸಮರ್ಥಪುರುಷರ ಗುಪ್ತ ವ್ಯಭಿಚಾರಗಳು ಮತ್ತು ಬಲಾತ್ಕಾರದ ಕಥೆಗಳು ಅಲ್ಲದೆ ದೊಡ್ಡ ದೊಡ್ಡ ರೋಮಾಂಚಕಾರಿಗಳಾದ ಉಪನ್ಯಾಸಗಳು ಈ ಪ್ರಕರಣಗಳಿಂದಲೇ ತುಂಬಿಕೊಂಡಿವೆ. ಇತಿಹಾಸದಲ್ಲಿನ ಗುಪ್ತಸ್ತ್ರೀಹರಣವಾದರೂ ಇದರದೇ ಒಂದು ಶಾಖೆಯಿದೆ. ದಶಕುಮಾರ ಚರಿತ್ರದಲ್ಲಿನ ಪುಷ್ಪೋದ್ಭವ ಬಾಲಚಂದ್ರಿಕೆಯ ಜತೆಗೆ, ದಾಸಿ ಸ್ತ್ರೀವೇಷದಲ್ಲಿ ದಾರುವರ್ಮನ ಮನೆಯಲ್ಲಿ ಸೇರಿಸಿ ರಾತ್ರಿ ದಾರುವರ್ಮನಿಗೆ ಭೂತದ ಭಯವನ್ನು ಹುಟ್ಟಿಸಿದ್ದಾಗಲೀ, ರಾಜವಾಹನನು ಅವಿಂತ ಸುಂದರಿಯ ಮನೆಯಲ್ಲಿ ಯಾವ ಪ್ರಕಾರದಿಂದ ಹಾಜರಾಗಿ ಎಂತಹ ವೈಚಿತ್ರ್ಯದಿಂದ ಅವಳನ್ನು ವಿವಾಹಮಾಡಿಕೊಂಡನೆಂಬುದು ದಶಕುಮಾರ ಚರಿತ್ರವನ್ನು ಓದಿದವರಿಗೆ ಹೊಸದಲ್ಲ. ಕಾದಂಬರಿಯಲ್ಲಿ ಕಿಂಜಲ್ಕಳು ಯಾವ ಪ್ರಕಾರದಿಂದ ಚಿತ್ರರಥನ ಬಂಧುವಿನ ಮನೆಯಲ್ಲಿ ಹಾಜರಾದಳು? ಅಲ್ಲದೆ ಮಹಾಶ್ವೇತೆಯು ಯಾವತರದಿಂದ ಕಾದಂಬರಿ-ಚಂದ್ರಾಪೀಡರನ್ನು ಜತೆಗೂಡಿಸಿದಳು. ಈ ಅಧ್ಯಾಯದಲ್ಲಿ ಹೇಳಿದ ವಿಷಯಗಳು ಸಂಸಾರ ಮತ್ತು ಇತಿಹಾಸಗಳಲ್ಲಿ ಸಮಾವೇಶವಾಗಿವೆ. ಸರ್ವಸಾಧಾರಣವಾಗಿ ಎಲ್ಲ ರಾಜಮನೆತನಗಳೂ ಇದ

